ಜನತಾ ಸಾಹಿತ್ಯ

# ಅಯ್ಯನೈ!

[ಆರು ಸಣ್ಣ ಕಥೆಗಳು]



ಕುಳುಕುಂದ ಶಿವರಾಯ



೧೯೪೫

ಪ್ರಕಾಶಕರು :

ಜನತಾ ಸಾಹಿತ್ಯ

೧೨೧, ಸುಲ್ತಾನ್‌ಪೇಟೆ, ಬೆಂಗಳೂರು ನಗರ

# ಆರು ಕಥೆಗಳು





# ಪರಿಚಯ

---

ಈ ಸಂಗ್ರಹದಲ್ಲಿರುವ ಆರು ಕಥೆಗಳಲ್ಲಿ—

"**ಬೆಳಕು ಹರಿಯಿತು!**" ಸೋವಿಯೆಟ್ ಆಸ್ಯದ ಒಂದು ಮುಹಮ್ಮದೀಯ ಉಪ ಜನಾಂಗದ ಕತೆ. ಅದರಲ್ಲಿ ಕಾಣಬರುವ ಖೋಸಿಯತ್ ಈಗಲೂ ಮಧ್ಯ ಆಸ್ಯದಲ್ಲಿದ್ದಾಳೆ. ಸ್ವಯಂ ನಿರ್ಣಯಾಧಿಕಾರ ಪಡೆದ ಆ ಜನಾಂಗದ ಸಾಹಸ-ಸಾಧನದ ಸತ್ಯ ಕತೆಯನ್ನು ಜೋಶುವಾ ಕುನಿಜ್ ಎಂಬವರು "Dawn Over Samarkand" ಎಂಬ ಪುಸ್ತಕದಲ್ಲಿ ಬರೆದಿದ್ದಾರೆ. ಅದರಿಂದೊಂದು ನಿಜ ವಿವರವನ್ನೆತ್ತಿ ಈ ಕತೆಯನ್ನು ಹೆಣೆಯಲಾಗಿದೆ.

"**ನೀವೂ! ನೀವೂ!**" ಅಸ್ಸಾಮಿನ ಜನಜೀವನದ ಕಾಲ್ಪನಿಕ ಕಥೆ. ಸ್ವದೇಶ ಪ್ರೇಮದಿಂದ ಹುಟ್ಟುವ ಹೊಸ ಹೋರಾಟವನ್ನು ಅದರಲ್ಲಿ ಕಾಣಬಹುದು.

"**ಇರುಳ ಛಾಯೆ**" ನಮ್ಮ ನಾಡಿನ ಪಶ್ಚಿಮ ತೀರದ ಭಂಡವಳ ವರ್ಗಕ್ಕೆ ಸಂಬಂಧಿಸಿದ್ದು. ಸೌಜನ್ಯ, ಸೌಶೀಲ್ಯ, ಜ್ಞಾನ — ಎಷ್ಟಿದ್ದರೂ ಆರ್ಥಿಕ ನಿಯಮದ ಪ್ರಭಾವದ ಫಲವಾಗಿ ಮನುಷ್ಯ "ಮನುಷ್ಯನಲ್ಲ" ವೆಂದಾಗುವ ಸ್ಥಿತಿಯೂ ಬರುತ್ತದೆ ಎಂಬುದನ್ನು ಇಲ್ಲಿ ಚಿತ್ರಿಸಲಾಗಿದೆ. ಈ ಕತೆಯೂ ಯುದ್ಧಕಾಲದ್ದೇ.

"**ಅಂಧಕಾರದಲ್ಲಿ**" ಕತೆಯನ್ನು ಬರೆದು ಮೂರೂವರೆ ವರ್ಷಗಳಾದುವು. ಒಂದು ಕಥಾಸ್ಪರ್ಧೆಯಲ್ಲಿ ಅದಕ್ಕೆ ಬಹುಮಾನ ಬೇರೆ ಬಂದಿತ್ತು. ಆದರೆ ಈಗ ಓದುವಾಗ ಬಹಳ "ನಾಟಕೀಯವಾಗಿದೆಯಲ್ಲ!" ಎನ್ನಿಸುತ್ತದೆ. ಆದರೂ ಅದೊಂದು ಜಪಾನೀ ವಿರೋಧದ ಕಥೆ.

---

**ಈ ಕಥೆಗಳೆಲ್ಲ ಈ ಮೊದಲೇ "ಉಷಾ" "ವಾಣಿ" ಮತ್ತು "ಕತೆಗಾರ" ಗಳಲ್ಲಿ ಅಚ್ಚಾಗಿವೆ.**

“**ಸಂಧಿಕಾಲ**” ದಲ್ಲಿ ಹಿರಿಯ ಕಿರಿಯ ಮನೋವೃತ್ತಿಗಳೊಳಗಿನ ಘರ್ಷಣೆಯಿದೆ. ಇದು ಪಾರ್ಟಿ ಕಥೆ ಎಂದು ಈಗಾಗಲೇ ಟೀಕೆ ಬಂದಿದೆ. ನಮ್ಮ ದೇಶ, ದೇಶದ ಪ್ರತಿಯೊಂದು ಕುಟುಂಬ, ಅನುಭವಿಸುತ್ತಿರುವುದರ ಚಿತ್ರಣ— ಇದು. ಹೊಸ ಪ್ರವಾಹದೊಡನೆ ಅಂತರ್ಗತವಾಗಿ ಹರಿಯುತ್ತಿರುವ ಪುರೋಗಾಮಿ ಮಧ್ಯಮವರ್ಗವನ್ನು ಇಲ್ಲಿ ಕಾಣಬಹುದು.

“**ಅಯ್ಯನ್ಸೈ!**” [ಐ. ಎನ್. ಎ.— ಇಂಡಿಯನ್ ನ್ಯಾಷನಲ್ ಆರ್ಮಿ] ಆಜಾದ್ ಹಿಂದ್ ಫೌಜಿನ ಯೋಧನಿಗೆ ಸಂಬಂಧಿಸಿದ್ದು. ಈ ಯೋಧ ವರದರಾಜು ಆಂಧ್ರದವನು. ನಾಡಿನ ಹೆಮ್ಮೆ, ಕಣ್ಣು:— ಹಿಂದೆ ಮಾಡಿದ್ದಲ್ಲ, ಮುಂದೆ ಅತ ಮಾಡಲಿರುವುದು ಮುಖ್ಯ.

ನಮ್ಮ ಸುತ್ತಲಿನ ತಿಮ್ಮ–ಹೋಮ–ಜೋರ ಈ ಕತೆಗಳಲ್ಲಿ ಇಲ್ಲ. ಆದರೆ ಪಿಲಿ–ರತನ–ಲಹರಿ ನಮ್ಮ ದೇಶದವರೇ. ಕಳೆದ ಮೂರು ವರ್ಷಗಳಲ್ಲಿ ಈ ದೇಶದ ಒಳಗೂ ಹೊರಗೂ ಆಗುತ್ತಿದ್ದ ಮಹೋತ್ಪಾತಗಳ ಪ್ರತಿಕ್ರಿಯೆಯಾಗಿ ಈ ಕೃತಿಗಳು ಬಂದಿವೆ.

ರಾಜಕೀಯ ದೃಷ್ಟಿ ಇರುವ, ಒಂದಕ್ಕೊಂದು ಸಂಬಂಧವಿರುವ ಆರು ಕತೆಗಳನ್ನಷ್ಟೆ ಇಲ್ಲಿ ಜೋಡಿಸಲಾಗಿದೆ. ಇದನ್ನು ಯುದ್ಧಸಾಹಿತ್ಯವೆಂದರೂ ಸರಿಯೆ. ಎಲ್ಲಾ ಪ್ರಚಾರಾತ್ಮಕ ಕಥೆಗಳು—ಎಂದು ಯಾರಾದರೂ ಹೇಳಬಹುದು. ಒಂದೊಂದರಲ್ಲೂ ಉದ್ದೇಶವಿದೆ—ಪ್ರಚಾರವಿದೆ ಅದು ಸತ್ಯವೆಂದು ನಾನು ಗಾಢವಾಗಿ ನಂಬುವುದರಿಂದ ಹೇಳುತ್ತ ಬರುತ್ತಿದ್ದೇನೆ. ವಿಶಾಲದೃಷ್ಟಿಯಿಂದ ನೋಡಿದಾಗ ಲೋಕದಲ್ಲಿ ಪ್ರತಿಯೊಂದು ಕೃತಿ–ಕಲೆಯೂ ಒಂದಲ್ಲ ಒಂದು ರೀತಿ ಪ್ರಚಾರಾತ್ಮಕವಾದುದೇ ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಒಂದಷ್ಟು ಚರ್ಚೆ–ವಾದಗಳಿಗೆ, ಪರಸ್ಪರ ತಿಳಿವಳಿಕೆಗೆ, ಈ ಸಂಗ್ರಹ ಕಾರಣವಾಗಲಿ ಎಂಬುದೇ ನನ್ನ ಹಾರೈಕೆ.

—**ಕುಳುಕುಂದ**

**೨೨ ಡಿಸೆಂಬರ್, ೪೫**

---



# ಬೆಳಕು ಹರಿಯಿತು!

ಖೋಸಿಯುತ್!

ಮಧ್ಯ ವಯಸ್ಸನ್ನು ಸಮೀಪಿಸಿದ್ದ ತಾಯಿ ಯೋಚಿಸಿದಳು—ಇನ್ನು ಹೆರುವುದುಂಟೆ? ತಂದೆಯೇನೋ ಗಡ್ಡವನ್ನು ತೀಡುತ್ತಾ, "ಯಾ ಅಲ್ಲಾ! ನೋಡು ನೋಡು, ಕಣ್ಣು ಬಿಟ್ಟಾಗಲೇ ಅರಚುತ್ತಿದ್ದಾಳೆ ಆಡಿನಂತೆ," ಎಂದ. ಮತ್ತೆ, "ಒಂದು ಗಂಡು ಒಂದು ಹೆಣ್ಣು-ಪುನಃ ಈ ಹೆಣ್ಣು, ಇನ್ನು ನಾಲ್ಕಾದರೂ ಗಂಡು ಹೆರಬೇಕು ನೋಡು!" ಎಂದು ರಾಗ ವೆಳೆದ. ಕೂಸು ಅಳತೊಡಗಿತು. ಕೆಟ್ಟ ಹುಡುಗಿ!—ಎಂದು ತಾಯಿ ಮನಸ್ಸಿನಲ್ಲೆ ಶಪಿಸಿದಳು. "ಬಾ-ಬಾ-" ಎಂದು ಶಕ್ತಿಯುಡುಗಿದ್ದ ಸ್ವರದಲ್ಲಿ ಬಲು ಮೆಲ್ಲನೆ ಮಗುವನ್ನು ಬರಸೆಳೆದು ಸಂತೈಸಿದಳು. ತಂದೆ ಮಂಚದ ಮೇಲೆ ಬಾಗಿದ. ಆ ಗಡ್ಡ-ಕಣ್ಣುಗಳನ್ನು ನೋಡಿ ಕೂಸು ಮತ್ತಷ್ಟು ಗಟ್ಟಿಯಾಗಿ ಕಿರಿಚಿತು. ಥೂ-ಥೂ-ಎಂದು ತಂದೆ ಹೊರಹೋದ ತಿರು-ತಿರುಗಿ ನೋಡುತ್ತಾ.

ಕೂಸು ಬೆಳೆದು ಕುಮಾರಿ. ಖೋಸಿಯುತ್ ಚಂದದ-ಮುದ್ದಾದ ಹುಡುಗಿಯಾದಳು.

ತಂದೆ ನೇಕಾರ, ದೈವ ಭಕ್ತ. ಹಿರಿಯಣ್ಣ ಹಿಟ್ಟು ತಯಾರಿಸುವ ಕಾರ್ಖಾನೆಯಲ್ಲಿ ದುಡಿಯುತ್ತಿದ್ದ. ತಾಯಿ ಮನೆಗೆಲಸವಾದಮೇಲೆ ಬಿಡುವಿದ್ದಾಗಲೆಲ್ಲ ಜಮಖಾನೆ ಹೆಣೆಯುತ್ತಿದ್ದಳು; ಟೊಪ್ಪಿಗೆ ಹೊಲಿಯುತ್ತಿದ್ದಳು. ಅಕ್ಕ ಅವಳಿಗೆ ನೆರವಾಗುತಿದ್ದಳು. ಖೋಸಿಯುತ್ ಓಡಿಯಾಡುತಿದ್ದಳು. "ಖೊಸಿಯಾ, ಬೀದಿಯಲ್ಲಿ ಆಡಬಾರದು ಕಣೇ; ಮನೆಯೊಳಗೇ ಇರು" ಎನ್ನುತಿದ್ದಳು ತಾಯಿ ಆಗಾಗ್ಗೆ.

ಬಾಗಿಲಿಂದ ಹೊರಗಿಣಿಕಬೇಕಾದರೆ ತಾಯಿ ತನ್ನ ಮುಖಕ್ಕೆ ಮುಸುಕು ಹಾಕಿಕೊಳ್ಳುತ್ತಿದ್ದಳು. "ಯಾಕಮ್ಮ ಹೀಗೆ? ಗುಮ್ಮನ ಹಾಗೆ ಕಾಣಿಸುತ್ತೀಯೆ!" ಎಂದು ಕುತೂಹಲದಿಂದ ಖೋಸಿಯತ್ ಕೇಳುವುದಿತ್ತು ಒಮ್ಮೊಮ್ಮೆ. ಅಕ್ಕನೂ ಅವಕುಂಠನ ಹಾಕಿಕೊಂಡಾಗ ಅವಳ ಕುತೂಹಲ ಕಿಡಿಗೇಡಿತನವಾಯಿತು. "ಆ ಕಪ್ಪು, ಕೊಳಕು, ದೊರಗು ಬಟ್ಟೆಯನ್ನು ಹರಿದು ಹಾಕುತ್ತೇನೆ ನೋಡು" ಎನ್ನುವಳು. "ನೋಡಮ್ಮ" ಎಂದು ಅಕ್ಕ ದೂರುಕೊಟ್ಟಾಗ ಅಮ್ಮ ಗದರಿಸುವಳು. ಕೋಣೆಯ ಮೂಲೆಗೆ ಹೋಗಿ, ಗೋಡೆಗೆ ಮುಖ ಮಾಡಿ, ಖೋಸಿಯತ್ ಅಳುವಳು.

ಈ ಮಧ್ಯೆ ತಾಯಿಗೆ ಗರ್ಭಸ್ರಾವವಾಯಿತು. ಹೆಮ್ಮಕ್ಕಳಿಬ್ಬರಿಗೂ ಅದು ತಿಳಿಯದು. ತಾಯಿ ಕೋಣೆಯಲ್ಲಿ ಅಸ್ವಸ್ಥ ಬಿದ್ದಿದ್ದಳು. ತಂದೆಯ ನಮಾಜು ಕೊನೆಯಿಲ್ಲದೆ ನಡೆದಿತ್ತು. ಅಣ್ಣ ಜೋಲು ಮೋರೆಯಿಂದ ಕೆಲಸಕ್ಕೆ ಹೋಗುತಿದ್ದ. ಬೇನೆಯಿಂದೆದ್ದಾಗ ತಾಯಿ ಅಪರಾಧಿನಿಯಂತೆ ನಡೆಯತೊಡಗಿದಳು. ಗಂಡನಿಗಾಗಿ ಮತ್ತೊಂದು ಗಂಡು ಕೂಸನ್ನು ಹಡೆಯುವುದಕ್ಕಾಗಲಿಲ್ಲವಲ್ಲ!....ಖೋಸಿಯತ್ ತಂದೆಯ ಗಡ್ಡದ ಮೇಲೆ ಬೆರಳೋಡಿಸಿದಾಗ, "ನಿನಗೊಬ್ಬ ತಮ್ಮ ಬರುತ್ತಾನೆ ಖೊಸಿಯಾ, ಬಂದೇ ಬರುತ್ತಾನೆ. ನಾನಿನ್ನೂ ಮುದುಕನಾಗಿಲ್ಲ, ಇನ್ನೂ ಇಲ್ಲ" ಎನ್ನುತ್ತಿದ್ದ ಆತ. ಖೋಸಿಯತಿಗೆ ಏನೂ ಅರ್ಥವಾಗುತ್ತಿರಲಿಲ್ಲ.

ಏಕಾಂಗಿನಿಯಾಗಿ ದಿನ ನೂಕುವುದು ಹುಡುಗಿಗೆ ಕಷ್ಟವಾಗುತಿತ್ತು; ಹಾಗೂ ಹೀಗೂ ಹೊತ್ತು ಹೋಗಬೇಕಾಗಿತ್ತು.

ಆದರೆ ಅವಳ ಏಳನೆಯ ವಯಸ್ಸಿನಲ್ಲಿ ಹೊಸ ಕೂಸು ಬಂತು. ಬಡಕಲು ಬಡಕಲಾದ ಗಂಡು ಮಗು. "ಅಮ್ಮಾ, ನಿನ್ನ ಹೊಟ್ಟೆಯಿಂದ ಬಂತೆ? ಆಗಲಿ, ಆಡುವುದಕ್ಕಾಯಿತು" ಎಂದಳು ಖೋಸಿಯತ್. ಆನಂದದಿಂದ ತುಂಬಿತ್ತು ತಂದೆಯ ಹೃದಯ.

ಮರು ವರುಷ ಸಂಭ್ರಮದ ವರುಷ. ಅಣ್ಣನಿಗೂ ಅಕ್ಕನಿಗೂ ಮದುವೆ. ಆ ಬಡವರ ಮನೆಯಲ್ಲೂ ತಿಂಡಿಗಳ ತಯಾರಿ ನಡೆದಿತ್ತು.

"ಮದುವೆಯೆಂದರೆ ಬಹಳ ಜನ ಬರುತ್ತಾರೆಯೆ?" ಎಂದು ಕೇಳುವಳು ಖೋಸಿಯತ್. ಅಕ್ಕ ಉತ್ತರ ಕೊಡಲೊಲ್ಲಳು; ಹೂಂ-ಉಹುಂ ಎನ್ನುವುದಕ್ಕೂ ಅಮ್ಮನಿಗೆ ಬಿಡುವಿರಲಿಲ್ಲ.

ಮದುವೆಯ ದಿನ ಮುಂಜಾನೆ ಖೋಸಿಯತ್ ಎದ್ದಾಗ ತಾಯಿ ಸಿದ್ಧವಾಗಿದ್ದಳು, ಹೊಸದೊಂದು ಚಿಕ್ಕ 'ಪರಂಜ' (ಬುರುಕೆ) ದೊಡನೆ.

"ಅತ್ತಿಗೆ ಬರುತ್ತಾಳೆ; ಭಾವ ಬರುತ್ತಾನೆ-ತೊಟ್ಟುಕೋ ಕಂದಾ ಇದನ್ನು."

"ನಾನೇ? ಅಯ್ಯೋವ್ಮಾ! ಮದುವೆಯಲ್ಲವೆ ಇವತ್ತು? ಒಂದ-ವರನ್ನೆಲ್ಲ ನೋಡಬೇಡವೆ? ಆಡಬೇಡವೆ?"

"ಶುರುವಾಯಿತು ಇವಳದು" ಎಂದು ಗೊಣಗಿದಳು ತಾಯಿ. "ತೊಟ್ಟುಕೊಳ್ಳೇ ಒಮ್ಮೆ!"

ಅಳಲು ಸಿದ್ಧವಾಗಿ "ನೀನೇ ತೊಟ್ಟುಕೊ!" ಎಂದಳು ಖೋಸಿಯತ್. ತಾಯಿ ಹೊಡೆಯಲು ಕೈಯೆತ್ತಿದಳು. ಓಹೋಓ-ಎಂದು ಗೋಳಾಟಕ್ಕೆ ಮೊದಲಾಯಿತು. ತಾಯಿ ಹೊರಹೋಗಿ ತಂದೆ ಓಡಿಬಂದ. ಒಂದು ಮಾತು, ಎರಡು ಮಾತು, ಮತ್ತೆ ಆಚೆಗೂ ಈಚೆಗೂ ಏಟು. ಬಾಗಿಲೆಳೆದುಕೊಂಡು ಸರಪಣಿ ತಗಲಿಸಿ ತಂದೆ ಹೊರಟುಹೋದ.

ಹೊರಗೆ ಮದುವೆಯ ಗದ್ದಲ ನಡೆದಿತ್ತು. ಒಳಗೆ ಖೋಸಿಯತಳ ಅಳು. ಒಮ್ಮೆ ಸುಮ್ಮನಾಗುವಳು ತಿರುಗಿ ಅಳುವಳು; ಪುನಃ ಸುಮ್ಮನಾಗುವಳು....ಮೂಲೆಯಲ್ಲಿ ತೊಟ್ಟಿಲಲ್ಲಿದ್ದ ಒಂದು ವರ್ಷದ ಮಗುವೂ ಅದೇ ಕೆಲಸ ಮಾಡುತಿತ್ತು. ಖೋಸಿಯತ್ ಹತ್ತಿರ ಹೋಗಿ ಅದನ್ನೇ ನೋಡಿದಳು. ಹೊಡೆದು ನೋಯಿಸಿಬಿಡೋಣವೆ? ಎನ್ನಿಸಿತು. ಆದರೆ ಅದು 'ತನ್ನ' ಕೂಸಲ್ಲವೆ? ಬುರುಕೆಯನ್ನೆಳೆದು ತಂದು ತೊಟ್ಟಿಲ ಬಳಿಯಲ್ಲಿ ಹಾಸಿ, ಮಗುವನ್ನೆ ನೋಡುತ್ತ ಕುಳಿತಳು. ಅಲ್ಲೇ ಜೊಂಪು ಹತ್ತಿತು.

ಮಧ್ಯಾಹ್ನ ತಾಯಿ ಕದ ತೆರೆದು ನೋಡಿದಾಗಲೂ ಮಗಳು ನಿದ್ರಿಸಿದ್ದಳು. ಎಬ್ಬಿಸಿ ಏನು ಮಾಡೋಣ? 'ಪರಂಜ' ಹಾಕಿಕೊಳ್ಳದೆ ಜನ

ಅಯ್ಯನ್ಯೆ !

ಠನ್ನು ಇಣಿಕಿ ನೋಡುವಂತಿರಲಿಲ್ಲ. ಸದ್ದಾಗದೆ ಮಗುವಿಗೆ ಮೊಲೆಯು ಣಿಸಿ, ಮಗಳಿಗೊಂದಷ್ಟು ತಿಂಡಿ ತಂದಿಟ್ಟು ತಾಯಿ ಕದ ಮುಚ್ಚಿ ಕೊಂಡಳು.

ಖೋಸಿಯತ್ ಎದ್ದಾಗ ಮಗು ಮಲಗಿತ್ತು. 'ಅಮ್ಮಾ! ಅಮ್ಮಾ!' ಎಂದು ಕೂಗಿದಳು ಎರಡು ಬಾರಿ. ತಿಂಡಿಯು ತಟ್ಟೆ ಕಣ್ಣಿಗೆ ಬಿತ್ತು. ಒಂದು ಖರ್ಜೂರದ ಹಣ್ಣನ್ನೆತ್ತಿ ಬಾಯಿಗಿಟ್ಟು 'ಥೂ' ಎಂದಳು. ರೊಟ್ಟಿ ರುಚಿಸಲಿಲ್ಲ. ಒಂದು ತುಂಡನ್ನು ತೆಗೆದು ತೊಟ್ಟಿಲಿಗೆಸೆದು "ತಿನ್ನು-ತಿನ್ನೋ!" ಎಂದಳು ಮಗುವಿಗೆ. ಅದು ಎಚ್ಚತ್ತು ಅಳತೊಡಗಿತು. ನಿಸ್ಸಹಾಯಳಾಗಿ ಮೂಕಿಯಾದಳು ಖೋಸಿಯತ್.

ಸಂಜೆಯಾಯಿತು, ರಾತ್ರಿಯಾಯಿತು. ಬೆಳಗಾಗುವ ಮುಂಚೆಯೇ ತಾಯಿ ಬಂದೆಬ್ಬಿಸಿದರು. ಆವಳ ಕಯ್ಯಲ್ಲೊಂದು ಕಂದೀಲು ಇತ್ತು. ಅಕ್ಕ ಮಗುವನ್ನು ಮುಟ್ಟಿ, ಖೊಸಿಯಾಳನ್ನು ಮುದ್ದಿಟ್ಟು, ಅಳುತಳುತ ಧಡಧಡನೆ ಹೋರಟುಹೋದಳು. ಮೊದಲು ಆವಾಕ್ಕಾಗಿದ್ದ ಖೋಸಿಯತ್ ಬಳಿಕ, "ನಾನು ಉಪವಾಸ ಬಿದ್ದಿದ್ದರೆ ಇವಳು ಅಳಬೇಕೆಂದು ಹೇಳಿದವರು ಯಾರು?" ಎಂದುಕೊಂಡಳು. ಹೊರಗೆ ಕಟ ಕಟ ಎಂದು ಗಾಡಿಯು ಸದ್ದಾಗುತಿತ್ತು.

ಬೆಳಗಾದಾಗ ತಾಯಿಯೂ ಅಳುತಿದ್ದುದು ಕಂಡಿತು. ಇವರಿಗೆಲ್ಲ ಏನಾಗಿದೆ? ತನ್ನನ್ನು ಯಾರೂ ಕೇಳುವವರಿಲ್ಲವೆ? ತಡೆಯಲಾರದ ಹಸಿವು ಬೇರೆ. ಬಲವಾಗಿ ರೋದಿಸತೊಡಗಿದಳು ಖೋಸಿಯತ್. ತನ್ನ ಕಣ್ಣೀರನ್ನೊರಸುತ್ತ ತಾಯಿ ಮಗಳನ್ನೆತ್ತಿಕೊಂಡು "ಅಳಬೇಡ ಕಂದಾ! ಅವಳು ಹೋದಳು-ಇನ್ನು ನೀನೊಬ್ಬಳೇ!" ಎಂದಳು ಬಿಕ್ಕಿ ಬಿಕ್ಕಿ.

"ಹೌದಮ್ಮ-ನಾನೊಬ್ಬಳೇ! ಊಟ ಬೇಡವೆ? ಆ ಪರಂಜ ಹಾಕಿಕೊಳ್ಳಲೇ ಬೇಕೆ?"

....ಖೋಸಿಯತ್ ಊಟ ಮಾಡಿದಳು. 'ಪರಂಜ' ಧರಿಸಿಕೊಳ್ಳಲೂ ಬೇಕಾಯಿತು!

" ನೋಡು ಖೊಸಿಯಾ, ನೀನು ಸುಂದರಿ-ಈ ಮೂಗು, ಈ ಕಣ್ಣು, ಈ ರೂಪ! ಬೆಕ್ [ಜಮೀನ್ದಾರ] ಅಧಿಕಾರಿಯ ಜನರ ಕಣ್ಣಿಗೆ ಬಿದ್ದರೆ ಅವರು ಹಿಡಿದು ಕೊಂಡೊಯ್ಯುತ್ತಾರೆ! ಪರಂಜ ಹಾಕಿಕೊಳ್ಳಲೇ ಬೇಕು."

ಖೋಸಿಯತ್ ಅಂಜಿದಳು ಬೆಕ್, ಹುಡುಗಿಯರನ್ನು ಏನು ಮಾಡುತ್ತಾನೆಂದು ಅವಳಿಗೆ ಗೊತ್ತಿರಲಿಲ್ಲ. ಆದರೆ ಅವನ ಅರಮನೆಯಲ್ಲಿ ಹೆಚ್ಚು ಹುಡುಗಿಯರು ಸಾಯುತ್ತಿದ್ದರೆಂದು ಅಕ್ಕ ತಿಳಿಸಿದ್ದಳು. ಖೊಸಿಯಾ ಮುಸುಕು ಧರಿಸಿದಳು. ಆ ಸಂಜೆ, ಅವಕುಂಠನದ ಅತ್ತಿಗೆಯನ್ನು ಅಣ್ಣ ಕರೆತಂದ. ಕತ್ತಲೆ ಕವಿದಿತ್ತು ಆಗಲೆ.

ಕತ್ತಲೆಯಷ್ಟೇ ಅಲ್ಲ, ಅಜ್ಞಾನವೂ ಆ ಊರನ್ನು ಕವಿದಿತ್ತು. ಪಶ್ಚಿಮದ ಯುರೋಪಿನತ್ತ ಘೋರ ಜಾಗತಿಕ ಯುದ್ಧ ಮೊದಲಾಗಿತ್ತೆಂಬ ಸುದ್ದಿ ಮಧ್ಯ ಆಸ್ಯದ ಆ ಫರ್ಗಾನಾ ಬೆಟ್ಟಗಾಡಿಗೆ ಬಂದು ತಲಪಿರಲಿಲ್ಲ.

o o o o o o

ಒಂಭತ್ತು ಹತ್ತು ವರ್ಷವಾಯಿತು ವಯಸ್ಸು. ಮ್ಲಾನ ಮುಖ; ಹಿಂದಿನ ಗೆಲವಿರಲಿಲ್ಲ. ಅದರಲ್ಲಿ ಘೋಪಾ ಧರಿಸುವುದು ಅವಳಿಗೆ ಅಭ್ಯಾಸವಾಗಿತ್ತು. ಓರಗೆಯವರಿಲ್ಲದೆ ಅವಳೊಬ್ಬಳೇ ಬೆಳೆಯುತ್ತಿದ್ದಳು.

ಅತ್ತಿಗೆಯೂ ಒಂದು ಹೆಣ್ಣು ಕೂಸನ್ನು ಹೆತ್ತಾಗ ಈ ಮುಗ್ಧೆಗೆ ಹೆದರಿಕೆಯಾಯಿತು. 'ಪರಂಜ' ತೊಟ್ಟುಕೊಂಡವರಿಗೆಲ್ಲ ಹೀಗೆಯೇ ಆಗುವುದೆ? ಆದರೆ ಮರುಕ್ಷಣದಲ್ಲೆ ಆಕೆ, ತನಗೆ ಮದುವೆಯಾಗಿಲ್ಲವಲ್ಲ— ಎಂದು ಸಮಾಧಾನಪಟ್ಟುಕೊಳ್ಳುವಳು.

ಆ ದಿನವೂ ಬಂತು, ಆಕೆಗೆ ಹದಿನಾಲ್ಕು ವಯಸ್ಸಾದಾಗ 'ಇಚಕಾರಿ'ಯಲ್ಲಿ [ಶ್ರೀಮಂತರ ಅಂತಃಪುರ; ಬಡವರಲ್ಲಿ ಅಡುಗೆಯ ಮನೆ] ತಂದೆ ತಾಯಿ ಎಷ್ಟೋ ವೇಳೆ ಗುಸುಗುಸು ಮಾತನಾಡುತಿದ್ದರು; ಖೋಸಿಯತ್ ಹತ್ತಿರ ಬಂದಾಗ ಸುಮ್ಮನಾಗುತಿದ್ದರು. ಒಂದು ದಿನ ತಾಯಿ ಕೇಳುತಿದ್ದಳು:

ಅಯ್ಯನ್ನೈ !

"ಆಸ್ತಿ ಪಾಸ್ತಿ ಏನಾದರೂ ಇದೆಯೆ ?"

"ಶ್ರೀಮಂತರಲ್ಲ; ಆದರೂ ತಕ್ಕಮಟ್ಟಿಗಿದೆ."

"ಸರಿ ಸರಿ. ಆಗಲಿ."

ಅನಂತರ ಸಿದ್ಧತೆಗೆ ಆರಂಭ. ವರನ ಸಂಬಂಧಿಯೊಬ್ಬಳು, ಅವಳ ನೆರೆಮನೆಯ ಇನ್ನೊಬ್ಬಳೊಡನೆ ಒಂದು ದಿನ ಬಂದು, ರೊಟ್ಟಿ ಮತ್ತು ಒಂದು ಜತೆ ಕರವಸ್ತ್ರಗಳ ಉಡುಗೊರೆ ಕೊಟ್ಟು, ಖೋಸಿಯತಳ ತಾಯಿಯೊಡನೆ ಮಾತನಾಡಿ ಹೋದಳು.

"ಒಬ್ಬ ಮುದಿ ಗೂಬೆ ಬರುತ್ತಾನೆ ನೋಡು ನಿನ್ನನ್ನು ಮದುವೆಯಾಗುವುದಕ್ಕೆ!"-ಎಂದು ಅತ್ತಿಗೆ ಅಣಕಿಸುತ್ತಿದ್ದಳು. ಖೋಸಿಯತ್ ಮಾಡುತಿದ್ದುದು "ಯಾ, ಅಲ್ಲಾ!" ಎಂದು ಮೂಕ ಪ್ರಾರ್ಥನೆ, ಅಷ್ಟೆ. ಮನ ತೆರೆದು ಮಾತನಾಡಿ ಹೃದಯದ ಭಾರವನ್ನು ಕಳೆಯಲು ಯಾವ ಆಪ್ತರೂ ಬಳಿಯಲ್ಲಿರಲಿಲ್ಲ.

ಊರಿನ 'ಇಮಾಮು'ನೂ [ಧರ್ಮಾಧಿಕಾರಿ] ಒಬ್ಬ ಮುದುಕನೂ ಹೆಂಗಸರು ಬಂದು ಹೋದ ಮೂರು ದಿನಗಳಮೇಲೆ ಖೊಸಿಯಾಳ ತಂದೆಯನ್ನು ಕಾಣಲು ಬಂದರು.

"ಹೊರಗಿದ್ದಾನೆ ಕಣೇ" ಎಂದಳು ಪಿಸು ಮಾತಿನಲ್ಲಿ ಅತ್ತಿಗೆ. ನೋಡಲು ಖೋಸಿಯತಿಗೆ ಆಸ್ಪದವಿರಲಿಲ್ಲ.

ಆದರೆ ಬಂದಿದ್ದ ಮುದುಕ ವರನ ಮಾವನಾಗಿದ್ದ. ದೀರ್ಘ ಚರ್ಚೆ ನಡೆದು ಹುಡುಗಿಯ ಬೆಲೆ ನಿರ್ಧರಿಸಿದರು. ಎರಡು ಟಗರು [ಗಂಡು ಕುರಿ], ನೂರ ಅರವತ್ತು ರಾತಲು ಅಕ್ಕಿ, ಖೋಸಿಯತ್ ಆ ವರೆಗೆ ಕುಡಿದಿದ್ದ ಹಾಲಿಗೆ ಪ್ರತಿಯಾಗಿ ಒಂದು ದನ, ಎರಡು ಕತ್ತೆಹೊರೆ ಸೌದೆ ಮತ್ತು ಮೂರು ಗಾಡಿಗಳು—ಇಷ್ಟನ್ನು ಹುಡುಗಿಯ ತಂದೆಗೆ ಕೊಡಬೇಕೆಂದಾಯಿತು....ತಾನು ನೋಡದೆ ಇದ್ದ ವರನಿಗೆ ವಧುವಿನ ತಾಯಿಯೂ ಉಡುಗೊರೆ ಕಳುಹಿದಳು.

ಮದುವೆಯ ದಿನ ಬಂತು. ವಧುವಿನ ಮನೆಯಲ್ಲಿ ಒಂದು ಕುರಿಯನ್ನು ಕೊಂದರು. ಮಾಂಸ ಅಂಗಳದಲ್ಲಿ ಬೇಯುತಿತ್ತು. ರಾಶಿ ರಾಶಿಯಾಗಿ ಬಂದು ಬಿದ್ದಿತ್ತು ತರಕಾರಿ. ಖೊಸಿಯಾ ಮಾತ್ರ 'ಇಚಕಾರಿ' ಯಲ್ಲಿ ದುಃಖಿನಿಯಾಗಿ ಅಳುತ್ತ ಕುಳಿತಿದ್ದಳು. ಆದರೆ ಅಷ್ಟೆಲ್ಲ ಸಂಭ್ರಮಕ್ಕೆ ತಾನೊಬ್ಬಳೇ ಕಾರಣವೆಂದು ಸ್ವಲ್ಪ ಸಂತೋಷವೂ ಆಗಿತ್ತು ಆಕೆಗೆ.

ಮುಲ್ಲಾ ಬಂದರು. ನಡು ಮನೆಯಲ್ಲಿ ಪ್ರಾರ್ಥನೆಗಳಾಗುತಿದ್ದುವು. ಗಟ್ಟಿಯಾಗಿ ಮುಲ್ಲಾ ಕೂಗಿದರು: "ಖೋಸಿಯತ್, ಈ ಮನುಷ್ಯ ನಿನ್ನ ಗಂಡನೆಂದು ಒಪ್ಪುತ್ತೀಯಾ?"

ಮೂರು ಬಾರಿ ಅದೇ ಪ್ರಶ್ನೆ. ಯಾವ ಮನುಷ್ಯ? ಏನು ಉತ್ತರ ಕೊಡಬೇಕು? "ಹಾಯ್ ಎನ್ನು ಮಗಳೆ" ಎಂದಳು ತಾಯಿ.

"ಹಾಯ್!"-ಬಲು ಮೆಲ್ಲನೆ ಬಾಗಿಲ ಹಿಂಬದಿಯಿಂದ.

ದುಃಖದಿಂದಲ್ಲ! ಸಮ್ಮತಿ ಸೂಚನೆಯ ಪದ್ಧತಿ ಅದು.

ಕತ್ತಲಾದಾಗ ಹೆಂಗಳೆಯರು "ಅಂತಃಪುರ"ದಲ್ಲಿ ಜಮಖಾನೆಗಳನ್ನು ಹಾಸಿದರು; ಗಾದಿಗಳನ್ನಿರಿಸಿದರು. ಶುಭ್ರ ರುಮಾಲು ಸುತ್ತಿದ್ದ ಟೀಪಿಯ ಯುವಕರಿಬ್ಬರು ಹೊದಿಕೆಯಿಂದ ಮುಚ್ಚಿದ ಒಬ್ಬನನ್ನು ಕರೆತಂದು ಹಾಸಿಗೆಯ ಮೇಲೆ ಕುಳ್ಳಿರಿಸಿದರು. ಅವಕುಂಠನದ ಹೆಂಗಸರೆಲ್ಲ ಕೋಣೆಯ ಮೂಲೆಯಲ್ಲಿ ಅವಿತುಕೊಂಡರು. ಮಹಾ ಕಾರ್ಯ ಮಾಡಿದವರಂತೆ ವರನನ್ನು ಅಲ್ಲಿ ಬಿಟ್ಟು ಗಂಡಸರು ಹಿಂತಿರುಗಿದರು. ಮೆಲ್ಲ ಮೆಲ್ಲನೆ ಖೊಸಿಯಾಳನ್ನು ಕರೆತಂದು ಬಿಟ್ಟುದಾಯಿತು. "ಇನ್ನು ಹೋಗುತ್ತೀಯಲ್ಲೇ ನೀನು....ಮರೆಯಬೇಡವಮ್ಮಾ!" ಎಂದು ಅತ್ತಿಗೆ ಅತ್ತುದೂ ಆಯಿತು. ಪಂಜು ಉರಿಯುತಿತ್ತು. ಸಾಕಷ್ಟು ಎಣ್ಣೆ ಸುರಿದು ಬಾಗಿಲೆಳೆದುಕೊಂಡು ತಾಯಿಯೂ ಹೊರಟು ಹೋದಳು.

ಅಲ್ಲಿ ಕುಳಿತಿದ್ದ ಆಕೆಯ ಗಂಡ ಇನ್ನೇನು ಮಾಡಬೇಕು? ಎದೆ ಡವಡವನೆ ಹೊಡೆದುಕೊಳ್ಳುತಿತ್ತು. ಇಬ್ಬರೂ ಪರಸ್ಪರ ಸಮೀಪದಲ್ಲೇ

ಕುಳಿತಿದ್ದರು. ಸ್ವಲ್ಪ ಅತ್ತಿತ್ತ ಸರಿಯಲು ಯಾರಿಗೂ ಧೈರ್ಯವಿಲ್ಲ. ಉಸಿರು ಬಿಡುವುದು ಸ್ತಿಮಿತಕ್ಕೆ ಬಂದಮೇಲೆ ವರ ಸ್ವಲ್ಪ ಹತ್ತಿರಕ್ಕೆ ಬಂದ. ಅವನ ಹೃದಯ ಹೊಯ್ದಾಡುತಿದ್ದುದು ಆಕೆಗೆ ಕೇಳಿಸುತಿತ್ತು. ಒಮ್ಮೆಲೆ ಹೆಂಡತಿಯ ಅವಕುಂಠನವನ್ನು ಸರಿಸಿಬಿಟ್ಟ. ರೋಮಾಂಚ ವಾಯಿತು ಆಕೆಗೆ. ಕದಲಲಿಲ್ಲ, ತಲೆಯೆತ್ತಲಿಲ್ಲ. ಅವನೂ ತನ್ನ ಹೊದಿಕೆಯನ್ನು ತೆಗೆದ. ದೀರ್ಘ ಕಾಲದಂತೆ ಕಂಡುವು ಆ ಕೆಲ ನಿಮಿಷ ಗಳು. ಒಮ್ಮೆ ಮೆಲ್ಲನೆ ಕಣ್ಣು ತೆರೆದು ಖೋಸಿಯತ್ ಗಂಡನನ್ನು ನೋಡಿದಳು. ಮುಗುಳ್ನಗುತ್ತ ಖೊಸಿಯಾಳನ್ನೇ ನೋಡುತ್ತಿದ್ದ ಅವನು ಅಪರಾಧಿಯಂತೆ ಕಣ್ಣು ತಿರುಗಿಸಿದ.

ಎಷ್ಟು ಕೋಮಲ-ಸುಂದರ! ನಿಜಕ್ಕೂ ಒಳ್ಳೆಯ ಹುಡುಗ. ತನ ಗಿಂತ ಸ್ವಲ್ಪ ದೊಡ್ಡವನಿರಬಹುದು, ಅಷ್ಟೆ. ಆನಂದದಿಂದ ಅಳಬೇಕೆಂದು ತೋರಿತು ಆಕೆಗೆ-ಆದರೆ ಧೈರ್ಯ ಬರಲಿಲ್ಲ.

ಮತ್ತೆ ನಾಲ್ಕು ಕಣ್ಣುಗಳೂ ಸಂಧಿಸಿದುವು. ಹೆಂಡತಿ ಹೆದರಿಕೊಳ್ಳ ಬಾರದೆಂದು ಗಂಡ ಗಾದಿಯಮೇಲೊರಗಿ ಕಣ್ಣು ಮುಚ್ಚಿಕೊಂಡ. ಅಲ್ಲೆ ಜೊಂಪು ಹತ್ತಿತು. ಅವನನ್ನು ಮನದಣಿಯೆ ನೋಡಿ ಖೊಸಿ ಯಾಳೂ ಮಲಗಿಕೊಂಡಳು. ಒಡಹುಟ್ಟಿದವರಂತೆ ಅವರು ನಿದ್ರಿಸಿ ದರು. ಪಂಜು ಉರಿಯುತ್ತಲೇ ಇತ್ತು.

ಖೋಸಿಯತ್, ಗಂಡ ಖಾಜಾನ ಜತೆಯಲ್ಲಿ, ಅವನ ಮನೆಗೆ ಹೋದಳು. ಆರು ತಿಂಗಳು ಅವರು ಜತೆಯಾಗಿದ್ದರು. ಆ ಮೇಲೆ ಖಾಜಾ, ಹತ್ತಿಯ ತೋಟದಲ್ಲಿ ದುಡಿಯಲು ಟಾಷ್ಕೆಂಟಿಗೆ ಹೊರಟು ಹೋದ. ಮತ್ತಾರು ತಿಂಗಳಲ್ಲಿ ತೀರಿಕೊಂಡ. ಖೊಸಿಯಾಳ ಜೀವನದ ಸರ್ವಸ್ವವಾಗಿದ್ದ ಆ ಒಡನಾಡಿ ಕಾಣದಾದ. ಹೀಗೆ ಒಂದೇ ಒಂದು ಪ್ರಬಲ ಆಘಾತ ಖೋಸಿಯತಳನ್ನು ಮುರಿದು ಮುದುಡಿಸಿಬಿಟ್ಟಿತು. ಆಕೆ ತವರು ಮನೆಗೆ ಮರಳಿದಳು.

" ನೀನು ಬಂದುದಾಯಿತು. ನಿನ್ನ ಜೆಲೆಯಾಗಿ ಬರಬೇಕಾಗಿದ್ದ ದನ ಇನ್ನೂ ಇಲ್ಲವಲ್ಲ. ಏನು ಗಂಡಸೋ-ಏನು ಮಾವನೋ ! ವಂಚಕರು !"

ಎಂದು ಕೆಟ್ಟ ಮಾತುಗಳನ್ನಾಡಿದ ಅಣ್ಣ. ಅವನ ಮೂರನೆಯ ಮಗು ವಿಗೆ ಕುಡಿಸಲು ಹಾಲಿರಲಿಲ್ಲ ಮನೆಯಲ್ಲಿ. ಹಿಟ್ಟಿನ ಕಾರ್ಖಾನೆಯಲ್ಲಿ ದುಡಿದು ದುಡಿದು ಅವನು ಪಶುವಾಗಿದ್ದ.

"ಸುಮ್ಮನಿರೋ !" ಎಂದು ತಾಯಿ ಗದರಿಸಿದಳು.

"ನಾನೂ ಸಾಯಬಾರದಿತ್ತೆ"-ಎಂದುಕೊಂಡಳು ಖೋಸಿಯಾ.

ಹಾಗೆಯೇ, ಆ ಎಳೆಯ ದೇಹವನ್ನು ದುಃಖದ ದೊರಗುಕಲ್ಲಿನ ಮೇಲೆ ತೇದು ಹೃದಯುವನ್ನು ಕೊರಗಿಸಿ-ಸೊರಗಿಸಿದ ಒಂದು ವರ್ಷ ಕಳೆಯಿತು.

ರಷ್ಯದಲ್ಲಿ ಜನರೆದ್ದು ರಾಜನನ್ನು ಓಡಿಸಿದರಂತೆ. ಶ್ರೀಮಂತರನ್ನು ಮುಗಿಸಿ ಬಡವರು ತಮ್ಮ ಸರಕಾರ ಸ್ಥಾಪಿಸಿದರಂತೆ. ನೆತ್ತರ ಹೊಳೆ ಹರಿಯಿತಂತೆ-ಎಂದೆಲ್ಲ ಸುದ್ದಿಗಳು ಬರತೊಡಗಿದುವು ದೂರದ ಆ ಪರ್ವತ ಪ್ರದೇಶಕ್ಕೆ; ಹಳೆಯ ಹಳ್ಳಿಗೆ. ಕ್ರಾಂತಿ ಆರಂಭವಾಗಿ ಆಗಲೆ ಐದು ವರ್ಷವಾಗುತ್ತೆಂದು ಆ ಜನರಿಗೆ ಗೊತ್ತಿರಲಿಲ್ಲ.

ದಿಗಿಲುಗೊಳಿಸುವ, ದೇಹದಲ್ಲೆ ನಡುಕ ಹುಟ್ಟಿಸುವ ಕತೆಗಳು ಅನುದಿನವೂ ಕೇಳಿಬಂದುವು. ಎದ್ದವರಿಗಿದಿರಾಗಿ ಶ್ರೀಮಂತ ಜನರೂ ಮರುಕ್ರಾಂತಿ ಮಾಡುತ್ತಿದ್ದರಂತೆ. ಕಳ್ಳರ ತಂಡಗಳೆದ್ದು ಲೂಟಿ ಮಾಡುತಿದ್ದುವಂತೆ. ಸುತ್ತಲಿನ ಕಾಡುಗಳಲ್ಲಿ ಕೊಲೆಯಾಗುತಿತ್ತಂತೆ.

ಸುಂದರಿಯರಾದ ಹುಡುಗಿಯರಿಗೆ ಉಳಿಗಾಲವಿಲ್ಲ !

ಪುಂಡರೊಂದು ದಿನ ಖೋಸಿಯತಳ ಗ್ರಾಮಕ್ಕೆ ನಡು ಹಗಲಲ್ಲೆ ಬಂದು, "ಕ್ರಾಂತಿ ಮಾಡುವ ಎದೆಗಾರಿಕೆ ಯಾರಿಗಿದೆ ಇಲ್ಲಿ ?" ಎಂದು ಅಟ್ಟಹಾಸಮಾಡಿ, ಹಾದಿಯಲ್ಲಿದ್ದ ಕೆಲವರನ್ನು ಕಡಿದು ಹಾಕಿದರು. ಕೊಲೆಯಾಗಿ ಮರಳದಿದ್ದವರಲ್ಲಿ ಖೋಸಿಯತಳ ತಂದೆಯೊಬ್ಬ. ಆಕೆಯ ಮಾವ 'ಚಾಯ್‌ಖಾನೆ' [ಟೀ ಹೋಟಲು] ಯಿಂದೋಡಿ ಬಂದು ಆ ದುಃಖದ ಸುದ್ದಿ ತಂದ. ಪ್ರಾಣ ಭಯದಿಂದ, ಯಾರೂ ಸ್ವರವೆತ್ತಿ ಅಳುವಂತೆಯೂ ಇರಲಿಲ್ಲ.

ಅಯ್ಯನ್ನೆ !

ಮಾವ ಹೇಳಿದ: "ಖೊಸಿಯಾಳನ್ನೂ ನನ್ನ ಮಗಳನ್ನೂ ಬೇರೆ ಊರಿಗೆ ಸಾಗಿಸಬೇಕು....

ಆ ರಾತ್ರಿ ಹುಡುಗಿಯರಿಬ್ಬರನ್ನೂ ಒಂದೆಡೆ ತಂದು ಮುದುಕಿಯರಂತೆ ವೇಷ ಹಾಕಿದರು. ತಾಯಿಯೂ ಜತೆಯಲ್ಲಿ ಹೊರಟಳು. ನಡೆಯುತ್ತ ಎರಡು ರಾತ್ರೆ ಎರಡು ದಿನಗಳ ಹಾದಿ ಸಾಗಿ, ಕೊಕಾಂಡ ನಗರಕ್ಕೆ ಅವರು ಬಂದರು.

ಆ ದೊಡ್ಡ ಪಟ್ಟಣದಲ್ಲಿ ಎಲ್ಲಿಗೆ ಹೋಗಬೇಕು? 'ಇಶಾನ'ನಲ್ಲಿಗೆ [ಧರ್ಮ ಗುರು] ಧಾವಿಸಿ ತಾಯಿ ರಕ್ಷಣೆ ಯಾಚಿಸಿದಳು. "ಈ ಹುಡುಗಿಯರು ನಿಮ್ಮಲ್ಲಿ ತೊತ್ತುಗಳಾಗಿರಲಿ" ಎಂದಳು. 'ಇಶಾನ್' ಆಕಾಶ ದತ್ತ ನೋಡುತ್ತಾ "ಮಾಂಸ ನಮ್ಮದು; ಎಲುಬು ನಿಮ್ಮದು" ಎಂದ. "ಜೀವಂತರಿರುವಾಗ ಅವರು ನನಗಾಗಿ ದುಡಿಯುವರು. ಸತ್ತ ಮೇಲೆ ನಿನ್ನವರಾಗುವರು" ಎಂದರ್ಥ. ತಾಯಿ ಊರಿಗೆ ಹಿಂತಿರುಗಿದಳು.

'ಇಶಾನ' ನ ಎಷ್ಟೋ ಮಂದಿ ಶಿಷ್ಯರು ತಿಂಡಿ-ಕಾಣಿಕೆಗಳನ್ನು ಹೊರೆ ಹೊರೆಯಾಗಿ ತರುತಿದ್ದರು. ದಿನ ತಪ್ಪದೆ ನಡೆಯುತಿತ್ತು ಹಬ್ಬ. ಆಳುಗಳಿಗೆಲ್ಲ ನಸುಕಿನಿಂದ ನಡುವಿರುಳಿನವರೆಗೆ ಬೇಯಿಸುವುದು-ಶುಚಿ ಮಾಡುವುದೇ ಕೆಲಸ. ಈ ಹುಡುಗಿಯರಿಗೆ ಸಂಬಳವಿರಲಿಲ್ಲ. 'ಇಶಾನ'ನ ಹಿರಿಯ ಹೆಂಡಿರಿಬ್ಬರು ತಾನು ಮೇಲು ತಾನು ಮೇಲೆಂದು ಓಡಿಸಿ ಯೋಡಿಸಿ ಹುಡುಗಿಯರನ್ನು ಹೊಡೆಯುತಿದ್ದರು. ರಾತ್ರೆ ಆ ಎಳೆಯರಿಬ್ಬರು ಪರಸ್ಪರರನ್ನು ಅಪ್ಪಿಕೊಂಡು ಅಳುತಳುತ ನಿದ್ದೆ ಹೋಗುತಿದ್ದರು.

ಖೋಸಿಯತಳನ್ನು ಪ್ರೀತಿಸಿದ್ದು 'ಇಶಾನ'ನ ಕಿರಿಯ ಹೆಂಡತಿ ಮಾತ್ರ. ಆಕೆಯದೂ ಖೊಸಿಯಾಳದೇ ಹರೆಯ. ಹದಿನಾರೊ ಹದಿನೇಳೊ. ಮುದುಕ ಗಂಡನ ಜತೆಯಲ್ಲಿ, ಹಿರಿಯ ಸವತಿಯರ ಅಧೀನ ದಲ್ಲಿ, ನರಕ ಯಾತನೆಯನ್ನು ಅನುಭವಿಸುತಿದ್ದಳು. ಎದೆ ನೋವು ಆರಂಭವಾಗಿ ಆಗಾಗ್ಗೆ ಅವಳು ರಕ್ತ ಕಾರುತಿದ್ದಳು.

ಒಂದು ದಿನ ಅಂತಃಪುರದ ಗೋಡೆಯನ್ನು ಭೇದಿಸಿ ಒಂದು ಸುದ್ದಿ ಬಂತು. ಕೆಲ ಹೆಂಗಸರು ಬುರುಕೆಯಿಲ್ಲದೆ ಏನನ್ನೋ ಹಾಡುತ್ತಾ

ಬಾವುಟ ಹಿಡಿದು ಬೀದಿಯಲ್ಲಿ ಮೆರವಣಿಗೆ ಹೋದರಂತೆ! "ಸೂಳೆಯರು, ಮಾಟಗಾತಿಯರು!" ಎಂದು ಶಪಿಸಿದರು ವೃದ್ಧೆಯರೆಲ್ಲ. ಖೋಸಿಯತ್ ಚಕಿತಳಾದಳು. 'ಇಶಾನ'ನ ಕಿರಿಯ ಹೆಂಡತಿಯ ಕಣ್ಣುಗಳು, ಕಾಣದ ಯಾವುದೋ ಆಸೆಯನ್ನು ವ್ಯಕ್ತ ಪಡಿಸುತಿದ್ದುವು. ಎಲ್ಲರೂ ಉದ್ವಿಗ್ನರಾದರು. ಉದ್ವಿಗ್ನತೆಯ ಫಲವಾಗಿ ಕಿರಿಯ ಯಜಮಾನಿತಿ ಹೆಚ್ಚು ಹೆಚ್ಚು ರಕ್ತ ಕಾರಿದಳು.

ಎಲ್ಲರೂ ಗಾಬರಿಯೆ. ತಬೀಬನು [ವೈದ್ಯ] ಬಂದ. "ರೋಗಿಗೆ ತಿಳಿಯದಂತೆ ಹಸುರು ಕಪ್ಪೆಗಳ ಮಾಂಸವನ್ನು ಹುರಿದು ಪಳು ದಿನ ತಿನ್ನಿಸಿ" ಎಂದ. ಆ ದಿನ ಒಬ್ಬಳು ಮುದುಕಿ ಮತ್ತು ಖೊಸಿಯಾ ಕಪ್ಪೆ ಹಿಡಿಯಲು ಹೋದರು.

ಮರು ದಿನ "ಇಬ್ಬರೇಕೆ? ನಾನೊಬ್ಬಳೇ, ಹಿಡಿದು ತರಬಲ್ಲೆ" ಎಂದಳು ಖೋಸಿಯತ್.

ಕೆರೆಯ ಹಾದಿ ತಪ್ಪಿ ಯಾವುದೋ ಮಾರ್ಗಕ್ಕೆ ಅವಳು ಇಳಿದಳು. ಹೊಸ ಹಾಡಿನ ಧ್ವನಿ ಕೇಳಿಸಿತು. ನೂರಾರು ಕೋಕಿಲ ಕಂಠಗಳು. ಸ್ತಬ್ಧಳಾಗಿ ಒಂದೆಡೆ ನಿಂತು ಅವಕುಂಠನದೆಡೆಯಿಂದ ಖೋಸಿಯತ್ ನೋಡಿದಳು. ಹುಡುಗಿಯರದೊಂದು ಗುಂಪು ಕತ್ತಿ-ಸುತ್ತಿಗೆಯ ಕೆಂಪು ಬಾವುಟ ಹಿಡಿದು ನಡೆದು ಬರುತಿತ್ತು. ಅವರು 'ಘೋಷೆ'ಯಲ್ಲಿರಲಿಲ್ಲ. ಯುವತಿಯರ ಜತೆಯಲ್ಲಿ ಕೆಲ ವೃದ್ಧೆಯರೂ ಇದ್ದರು. "ಪರಂಜ ನಿರ್ನಾಮವಾಗಲಿ! ಮಧ್ಯ ಏಸ್ಯದ ಸ್ವತಂತ್ರ ಸ್ತ್ರೀ ಚಿರಕಾಲ ಬಾಳಲಿ!" ಎಂದು ಅವರು ಘೋಷಿಸುತಿದ್ದರು. ಅಷ್ಟು ಹೆಮ್ಮೆಯಿಂದ ಎದೆಯೆತ್ತಿ, ತಲೆಯೆತ್ತಿ ಅವರು ನಡೆಯುತ್ತಿದ್ದರಲ್ಲವೆ? ಅವರ ಜತೆಯಲ್ಲೆ ಅವರ ಹಾಗೆಯೇ ಇರಬೇಕು; ಆ ಹಾಡನ್ನೆ ಹಾಡಬೇಕು; ಅದೇ ಬಾವುಟ ಹಿಡಿಯಬೇಕು-ಎಂದು ತೋರುತಿತ್ತು ಹುಚ್ಚು ಹುಡುಗಿ ಖೊಸಿಯಾಳಿಗೆ. ಕಾಲುಗಳು ಕದಲಿದುವು. ಗುಂಪಿನ ಜತೆಯಲ್ಲೇ, ಅವಕುಂಠನವತಿ ಯಾಗಿಯೇ ಅವಳು ಸಾಗಿದಳು.

ಅಂತೂ ಮೆರವಣಿಗೆ ಕೊನೆಗಂಡಿತು. ತಂಪಾದ ನೆರಳು ಬೀರುತಿದ್ದ ಹಲ ಮರಗಳಡಿಯಲ್ಲಿ ಜಮುಖಾನೆಗಳನ್ನು ಹಾಸಿ ಒಂದು ವೃತ್ತವನ್ನು ರಚಿಸಿ ಅವರು ಕುಳಿತುಕೊಂಡರು; 'ಕೊಕ್ ಚಾಯ್' [ಹಸುರು ಚಾ] ಕುಡಿದರು; ಸೇಬು ಹಣ್ಣು ತಿಂದರು; ಭಾಷಣಗಳಿಗೆ ಕಿವಿಗೊಟ್ಟರು. ಸುತ್ತು ಮುತ್ತಲೂ ಪರದೆ ಧರಿಸಿ ನಿಂತಿದ್ದ ಎಷ್ಟೋ ಹೆಂಗಸರಿಗೆ ಭಾಷಣ ಅರ್ಥವಾಗುತ್ತಿರಲಿಲ್ಲ. ಸುಮ್ಮನೆ ನೋಡುತ್ತ ಅವರು ನಿಂತಿದ್ದರು ಅಷ್ಟೆ.

"ನೀವೆಲ್ಲರೂ ಕಿತ್ತೊಗೆಯಿರಿ ಪರಂಜವನ್ನು !" ಎಂದರು ಯಾರೋ. ಖೋಸಿಯಳಿಗೆ ಧೈರ್ಯ ಬರಲಿಲ್ಲ. ಆದರೆ ಆಕೆ ಜಮುಖಾನದ ಒಂದು ಮೂಲೆಯಲ್ಲಿ ಹುಡುಗಿಯೊಬ್ಬಳ ಪಕ್ಕದಲ್ಲಿ ಕುಳಿತಳು. ತಿನ್ನು 'ರಫೀಕ್' [ಕಾಮ್ರೇಡ್]-ಎಂದು ಆ ಹುಡುಗಿ ಖೊಸಿಯಾಳಿಗೆ ಒಂದು ಸೇಬು ಹಣ್ಣು ಕೊಟ್ಟಳು. ಖೋಸಿಯತಿಗೆ ಸಂತೋಷವಾಯಿತು.

ಮಧ್ಯ ವಯಸ್ಸಿನ ಇಬ್ರಾಹಿಮೋವಾ, ಸಂಪ್ರದಾಯಗಳ ಫಲವಾಗಿ ಮಹಿಳೆಯರು ಪಡಬೇಕಾದ ಕಷ್ಟ; ಆರೈಕೆ ತಿಳಿಯದೆ ಹಸು ಗೂಸುಗಳು ಸಾಯುವುದು; ಪರಂಜದಿಂದಾಗುವ ಅನ್ಯಾಯ—ಎಲ್ಲ ವನ್ನೂ ವಿವರಿಸಿದಳು. ತಾಯಿ, ಕರುಣಕತೆಯನ್ನು ಮಕ್ಕಳಿಗೆ ಹೇಳಿ "ಅಳಬೇಡಿ ಕಂದಮ್ಮಗಳಿರಾ!" ಎಂದಂತೆ. ಸಭೆ ಮುಗಿದಾಗ ಖೋಸಿಯತ್ ಇಬ್ರಾಹಿಮೋವಳ ಬಳಿಗೆ ಹೋಗಿ, ಎದೆಯಲ್ಲಿ ಮೊಗವಿಟ್ಟು ಬಿಕ್ಕಿ ಬಿಕ್ಕಿ ಅತ್ತಳು. ಹೊಸ 'ಮಗಳ'ನ್ನು ಕರೆದುಕೊಂಡು ಬಾಲಿಕಾ ಗೃಹಕ್ಕೆ 'ತಾಯಿ' ನಡೆದಳು.

ನೆಲದ ಮೇಲೆ ನಡೆಯುತ್ತಿದ್ದಂತೆ ಭಾಸವಾಗಲಿಲ್ಲ ಆ ಹುಡುಗಿಗೆ. ಅಷ್ಟು ಹಗುರ-ಹಗುರವಾಗಿತ್ತು ಎಲ್ಲ. 'ಇಶಾನ'ನ ಅರಮನೆ-ಸೆರೆ ಮನೆ ಮರೆತು ಹೋಯಿತು. ಸೋದರ ಅತ್ತಿಗೆಯ ನೆನಪೇನೋ ಆಯಿತು. ಆದರೆ ಹೋಗಿ ಕರೆತರುವಂತಿರಲಿಲ್ಲ.

ಬಾಲಿಕಾ ಗೃಹದಲ್ಲಿ ಇಬ್ರಾಹಿಮೋವಾ ನಗುನಗುತ ಖೊಸಿಯಾಳ ಅವಕುಂಠನವನ್ನೆತ್ತಿ ಒಯ್ದೇ ಬಿಟ್ಟಳು! ಚಳಿಗೆ ಸಿಕ್ಕಿ ತತ್ತರಿಸಿದವರಂತೆ

ಆಯಿತು ಖೋಸಿಯತ್‌ಗೆ ಸ್ವಲ್ಪ ಹೊತ್ತು. ಆದರೆ ಅಲ್ಲಿ ಯಾರೂ ಗಂಡಸರಿರಲಿಲ್ಲ.

ಹೊಸ ಬಾಳು. ತೊಡುವುದಕ್ಕೆ ಒಳ ಇಜಾರ; ಮೇಲೆ ಲಂಗ. ಕೂದಲನ್ನು ಅಂದವಾಗಿ ಬಾಬ್ ಕ್ರಾಪ್ ಕತ್ತರಿಸಿದರು. ಕನ್ನಡಿ ಯೆದುರು ನೆಟ್ಟಗೆ ನಿಂತಾಗ ಹದಿನೇಳರ ಅಪರಿಚಿತ ಹುಡುಗಿ ಸ್ಫುರ ದ್ರೂಪಿಣಿ ಯಾವಳೋ ಕಂಡು ಬಂದಳು! ಅಸ್ಪಷ್ಟ ಉದ್ಗಾರ ಖೊಸಿಯಾಳ ತೆರೆದ ಬಾಯಿಂದ ಹೊರಟಿತು. ಇಬ್ರಾಹಿಮೋವಾ "ಗೊತ್ತಿದೆಯೇನೆ ನಿನಗೆ, ಕನ್ನಡಿಯಲ್ಲಿ ಕಾಣುವುದು ಯಾರಂತೆ ಹೇಳು!" ಎಂದು ನಗೆ ಯಾಡಿದಳು.

....ಸ್ವಚ್ಛವಾಗಿ ಸ್ನಾನದ ಮನೆಯಲ್ಲಿ ಮಿಂದು, ಶುಭ್ರವಾಗಿದ್ದ ಹಾಸಿಗೆಯ ಮೇಲೆ ಮಲಗಿ, ಕಣ್ಣು ಮುಚ್ಚಿಕೊಂಡು ಅಳುತ್ತ-ನೆನವರಿ ಸುತ್ತ "ಇದೆಲ್ಲ ಕನಸು" ಎಂದುದಾಯಿತು.

ಮರುದಿನದಿಂದಲೆ ಪಾಠ-ಅಕ್ಷರಾಭ್ಯಾಸ. ಓದುಬರಹ, ಗಣಿತ, ಭೂಗೋಲ ಶಾಸ್ತ್ರ. ಬಂಧಿಸಿಡಲ್ಪಟ್ಟಿದ್ದ ಮೇಧಾಶಕ್ತಿ ಹುಚ್ಚು ಹೊಳೆ ಯಾಗಿ ಹರಿಯಿತು. ದಿನಗಳು-ಮಾಸಗಳು, ಹೊಸ ಲೋಕದ ಸ್ವತಂತ್ರ ಕೋಗಿಲೆಗಳ ಸ್ವಚ್ಛಂದ ಕಲರವದಲ್ಲೆ, ಉರುಳಿ ಕಾಣದಾದುವು.

....ಆ ದಿನ ಖೋಸಿಯತ್ ತರಗತಿಯಲ್ಲಿ ನಾಯಿಕೆ. ಶಾಲೆ ಆರಂಭ ವಾಗುವುದಕ್ಕೆ ಮೊದಲೇ ಬಂದು ಆಕೆ ಕಸ ಗುಡಿಸಿ, ಶೃಂಗರಿಸುತ್ತಿದ್ದಳು. ಅವಸರವಸರವಾಗಿ ಯಾರೋ ಒಬ್ಬಳು ಫೋವಾ ಧರಿಸಿ ಅಲ್ಲಿಗೆ ಬಂದಳು. ಒಬ್ಬ ಹುಡುಗನೂ ಅಂಜುತ್ತಂಜುತ್ತ ಆಕೆಯ ಸೀರೆಯಲ್ಲಿ ಮುಖ ಮರೆಸಿ ಬರುತ್ತಿದ್ದ.

"ಯಾರು ಬೇಕು?" ಎಂದಳು ಖೋಸಿಯತ್.

"ಇಲ್ಲಿ ಯಾರಾದರೂ ಗಂಡಸರಿದ್ದಾರೆಯೆ?" ಎಂದಿತು ಸ್ವರ, ಇಳಿ ದನಿಯಲ್ಲಿ.

ಖೊಸಿಯಾಳಿಗೆ ನಗು ಬಂತು. "ಇಲ್ಲವಲ್ಲ! ಒಂದು ಪಿಳ್ಳೆಯೂ ಇಲ್ಲಿಲ್ಲ."

ಆ ಹೆಂಗಸು ಅವಕುಂಠನ ತೆಗೆದಳು. "ಅಮ್ಮಾ!" ಎಂದು ಹರ್ಷೋದ್ಗಾರವೆತ್ತಿದಳು ಖೋಸಿಯತ್. "ಅಮ್ಮಾ!"

ಆ ಹೆಂಗಸು ಗಾಬರಿಯಾಗಿ ಹಿಂದೆ ಸರಿದಳು. ಹುಡುಗ ಪಿಳಿ ಪಿಳಿ ಕಣ್ಣು ಬಿಡುತಿದ್ದ.

ಬಲು ದೂರದ ಹಳ್ಳಿಯಿಂದ ತನ್ನ ತಾಯಿ ಬಂದಿದ್ದಳು. ಶಾಲೆಯ ಮುಖ್ಯಾಧ್ಯಾಪಿಕೆ ಹೇಳಿಕಳುಹಿದ್ದಿರಬಹುದು. ಆ ಹುಡುಗ ಹತ್ತು ವರುಷದ ತನ್ನ ತಮ್ಮ—ರಖ್‌ಮಾನ್!

"ಅಮ್ಮಾ! ಯಾಕೆ ಹಾಗೆ ನಿಂತಿದ್ದೀಯೆ? ಗುರುತು ಹತ್ತಲಿಲ್ಲವೆ? ನೋಡು-ನೋಡು, ನಾನು ಖೊಸಿಯಾ!"

ಖೊಸಿಯಾ? ಅಲ್ಲ, ತನ್ನ ಮಗಳು ಖೋಸಿಯತ್ ಎಂದಿಗೂ ಅಲ್ಲ! ಯಾವಳೋ ದುಷ್ಟೆ ಇರಬೇಕು....

....ಅಳುತ ಖೋಸಿಯತ್ ತಾಯನ್ನಪ್ಪಿಕೊಂಡಳು....ಆ ವೃದ್ಧೆಯ ಇಂಗಿದ ಕಣ್ಣುಗಳಿಂದಲೂ ನೀರು ಹರಿಯಿತು....ಮಂಜು ಕರಗಿತು....

ತಾಯಿ ಆ ದಿನ ಅಲ್ಲಿ ಉಳಿದುಕೊಂಡು ಎಲ್ಲವನ್ನೂ ನೋಡಿದಳು. ಕನಸಿನ ರಾಜ್ಯದಲ್ಲಿದ್ದವನಂತೆ ತಮ್ಮ ರಖ್‌ಮಾನ್, ಅಕ್ಕ ಏನು ಹೇಳಿದರೂ, ಅರ್ಥಹೀನ ನಗುವನ್ನಷ್ಟೆ ಬೀರುತಿದ್ದ. ಮಗಳು ಓದಬಲ್ಲಳು. ಆ ಸಂಗಡಿಗರು, ಶಾಲೆಯ ಇಬ್ರಾಹಿಮೋವಾ-ಎಲ್ಲರೂ ಒಳ್ಳೆಯವರೇ.... ಅಳು-ದುಡಿಮೆಯ ಅಂತಃಪುರ, ಅಲ್ಲಿರಲಿಲ್ಲ. "ಇಲ್ಲ, ಇವರ ಜಗತ್ತು ಬೇರೆ-ನನ್ನದು ಬೇರೆ" ಎಂದುಕೊಂಡು ತಾಯಿ ದೀರ್ಘ ನಿಟ್ಟುಸಿರು ಬಿಟ್ಟಳು.

ರಾತ್ರಿ ಹಾಸಿಗೆಯಮೇಲೆ ಮಲಗಲು ಆಕೆ ಒಪ್ಪಲಿಲ್ಲ. ನೆಲದಲ್ಲೆ ಬಟ್ಟೆ ಹಾಸಿ ತಾಯಿ ಮಕ್ಕಳಿಬ್ಬರೂ ಮಲಗಿದರು. ಮರುಕದ ಧ್ವನಿಯಲ್ಲಿ ತಾಯಿ ಹೇಳಿದಳು: "ನೀನು ಬದುಕಿದ್ದೆ ಎಂದು ಗೊತ್ತೇ ಇರಲಿಲ್ಲ

ಖೊಸಿಯಾ. 'ಇಶಾನ' ಒಬ್ಬ ಕೊರವಂಜಿಯನ್ನು ಕೇಳಿದನಂತೆ. ಅವನು ಮಂತ್ರ ತಂತ್ರಗಳನ್ನು ಮಾಡಿ "ಒಬ್ಬ ದೊಡ್ಡ ಮನುಷ್ಯ, ಕಾಫರ, ಬೋಲ್ಶೋವಿ ಆ ಹುಡುಗಿಯನ್ನು ಹಿಡಿದು, ಕೆಡಿಸಿ, ಕೊಂದು, ಒಂದು ಕೆರೆಗೆಸೆದ" ಎಂದನಂತೆ...."

ಖೊಸಿಯಾ ನಕ್ಕಳು.

"ನೀನು ನಗುತ್ತೀ....ಹಳ್ಳಿಗೆ ಆ ಸುದ್ದಿ ಬಂದಾಗ ನಾವು ಪಟ್ಟ ದುಃಖ ಎಷ್ಟೋ ಆ ಅಲ್ಲಾನಿಗೆ ಗೊತ್ತು....ಖೊಸಿಯಾ! ಮನೆಗೆ ಬಂದು ಬಿಡು ಮಗು...."

"ಮನೆಗೆ? ಅಯ್ಯೋ ಉಂಟೇ ಅಮ್ಮಾ—!"

ತಾಯಿಗೆ ತಿಳಿಯಿತು, ಹಿಂದಿನದೇ ತುಂಟ ಹುಡುಗಿ....ತನಗಿಂತಲೂ ಎತ್ತರವಾಗಿ ದೃಢವಾಗಿ ಏಕೆ ಅವಳು ಬೆಳೆದಳು? ಚಿಕ್ಕ ಕೂಸಾಗಿರುತಿದ್ದರೆ ಮಡಿಲಲ್ಲಿ ಅಡಗಿಸಿ ಓಡಿಹೋಗಬಹುದಾಗಿತ್ತು.

ಮರುದಿನ ತಾಯಿ ಮತ್ತೊಮ್ಮೆ ಕೇಳಿದಳು. ಮಗಳು ಒಪ್ಪಲಿಲ್ಲ....

ತನ್ನಷ್ಟೇ ತಾನು ಸಂತೈಸುವಂತೆ ತಾಯಿ, "ಇರಬಹುದು ಖೊಸಿಯಾ....ಈಗಿನ ಹುಡುಗಿಯರ ವಿಚಾರವೇ ಸರಿ ಇರಬಹುದು.... ಆದರೆ ಇದೆಲ್ಲ ಆಗುವ ಮೊದಲೇ ಅಲ್ಲಾ ನನ್ನನ್ನು ಮುಗಿಸಬೇಕಾಗಿತ್ತು" ಎಂದಳು. ಮತ್ತೆ ಪುನಃ "ನೀನು ಅನ್ಯಾಯ ಮಾಡಿದೆ ಖೊಸಿಯಾ.... ಒಳ್ಳೆಯ ಯಾವ ಮುಸ್ಲಿಮನ ಎದುರಲ್ಲೂ ನಾನಿನ್ನು ತಲೆ ಎತ್ತುವಂತಿಲ್ಲ. ನನ್ನ ಜೀವನ ಕಷ್ಟವಾಗುವುದು," ಎಂದು ಕಣ್ಣೀರಿಟ್ಟಳು.

ಭಾರವಾದ ಹೃದಯದಿಂದ ಮತ್ತಷ್ಟು ಬಾಗಿ, ತಾಯಿ ಕಿರಿಯ ಮಗನೊಡನೆ ಬಂದ ಹಾದಿಯಲ್ಲೆ ಹಿಂದೆ ಹೋದಳು.

....ಆ ಒಳ್ಳೆಯ ದೈವಭಕ್ತೆ ಅಲ್ಲಾನ ಚಿಂತನೆಯಲ್ಲೆ ಒಂದು ವರ್ಷದ ಮೇಲೆ ತೀರಿಕೊಂಡಳೆಂದು ಮಗಳಿಗೆ ಸುದ್ದಿ ಬಂತು....

ಅಯ್ಯನ್ನೆ !

ಬೆಳೆಯುತ್ತ ನಡೆದಳು ಖೋಸಿಯತ್. ಪೂರ್ಣ ಪ ಗ ಗು ಯತ್ತ ವೇಗವಾಗಿ ಸಾಗುತ್ತಿತ್ತು ಅವಳ ದೋಣಿ. ಸಂಗಡಿಗ ನಾವಿ ನೊಬ್ಬ ನಿರಾಯಾಸವಾಗಿ ಆಕೆಗೆ ದೊರೆತ.

○ ○ ○ ○ ○ ○

....ರಾತ್ರಿ, ರೈಲು ನಿಲ್ದಾಣದತ್ತ ಅವರಿಬ್ಬರೂ ನಡೆದಿದ್ದರು—ತರು ಫೈಜಲ್, ಜತೆಯಲ್ಲಿ ಇಪ್ಪತ್ತರ ಖೊಸಿಯಾ. ಇಬ್ಬರ ಕೈಯಲ್ಲ ಒಂದೊಂದು ಟ್ರಂಕಿತ್ತು. ಕೊಕಾಂಡದ ಶೀತಲ ಗಾಳಿ ಅವರಿಗಿದಿರಾ ಬೀಸುತಿತ್ತು. ಇಬ್ಬರೂ ಮುಂದೆ ಸಾಗಿದರು.

ರೈಲು ಹೊರಟು ನಿಂತಿತ್ತು ಟಾಷ್ಕೆಂಟಿಗೆ ಹೋಗುವುದಕ್ಕೆ. ಖೊ ಯತ್ ಕೂಡ ಟಾಷ್ಕೆಂಟಿಗೆ ಹೋಗುವಳು, ನಾಲ್ಕು ವರ್ಷಗಳ ವಿದ್ಯಾಭ್ಯಾಸಕ್ಕಾಗಿ....ಆಕೆ ಒಳಗೆ ಕುಳಿತುಕೊಂಡಳು. ಫೈಜಲ್ ಕಿ ಬಳಿ ನಿಂತ.

ಹಸುರು-ಕೆಂಪು ಲಾಟಾನಿನೊಡನೆ ಗಾರ್ಡ್ ಅತ್ತ ಬಂ ಖೊಸಿಯಾ "ಟೊವಾರಿಶಿ [ಕಾಮ್ರೇಡ್], ಈ ಸೋವಿಯೆಟ್ ರೈ ಯಾವಾಗ ಹೊರಟೀತು?" ಎಂದಳು ರಾಗವಾಗಿ.

ಮುದುಕ ಗಾರ್ಡಿಗೆ ನಗು ಬಂತು : "ಯಾವಾಗ ಎನ್ನಲಿ ಮ ಹತ್ತೂವರೆ ಹೊರಡಬೇಕಾದ ಹೊತ್ತು. ಹನ್ನೆರಡಕ್ಕಾದರೂ ಸ್ಟೆ ಬಿಡಬೇಕು ತಾನೆ....ಹೊಸ ಲೈನಿನಲ್ಲಿ ಯಾಕೆ ಈ ಮುರುಕಲು ಹಾಕಿದ್ದಾರೆಯೊ ! ಸ್ಟಾಲಿನಿಗೆ ಬರೆಯಬೇಕೆಂದಿದ್ದೇನೆ." ಖೋ ಜತೆಯಲ್ಲಿ ಫೈಜಲ್ ಕೂಡ ನಕ್ಕ. "ಇಲ್ಲ ಮಾವ. ಮೊದಲ ವಾರ್ಷಿಕ ಯೋಜನೆ ಒಮ್ಮೆ ಶುರುವಾಗಿ ಮುಕ್ತಾಯವಾಗಲಿ. ನೋಡಂತೆ. ಹೊಸ–ವೇಗದ-ರೈಲು ಬರುತ್ತದೆ" ಎಂದ.

ಮುದುಕ ಹೇಳಿದ "ಬಂದೀತು-ನಮ್ಮ ಜನ ಏನನ್ನೂ ಬಲ್ಲರು....ನಾನೂ ಅಷ್ಟರವರೆಗೆ ಜೀವಂತನಾಗಿರಲು ಪ್ರಯತ್ನ ತ್ತೇನೆ....ನೀವೂ ಒಮ್ಮೆ ಅದೇ ರೈಲಿನಲ್ಲಿ ಬನ್ನಿ-ನಿಮ್ಮ ಮಗನೊಡನೆ !

ಪ್ಲವಪ್ಪ ಇಲ್ಲ'' ಎಂದಳು ಖೊಸಿಯಾ. ಫೈಜಲ್ ನಗುತ್ತ, "ಮಗುವಿನ ವಿಚಾರ ಇನ್ನೂ ಇಲ್ಲ. ಖೊಸಿಯಾ ಟಾಷ್ಕೆಂಟಿಗೆ ಕಲಿಯಲು ಹೋಗುತ್ತಿದ್ದಾಳೆ'' ಎಂದ.

ಮುದುಕ ಏನೋ ಯೋಚನೆಗೆ ಬಿದ್ದವನಂತೆ "ಕಲಿಯುವುದು—ಕಲಿಯುವುದು, ಎಲ್ಲರೂ ಕಲಿಯುತ್ತಿದ್ದಾರೆ ಈಗ. ವಯಸ್ಸಾಯಿತು....ಇಲ್ಲದಿದ್ದರೆ ನಾನೂ ಕಲಿಯುತ್ತಿದ್ದೆ....ಆದರೆ ಈ ಹೊಸ ಯುಗದಲ್ಲಿ ಬದುಕುವ ಭಾಗ್ಯವಾದರೂ ಇದೆಯಲ್ಲ. ನನ್ನ ತಮ್ಮ ಗ್ರಿಗರಿಗೆ ಅದೂ ಇರಲಿಲ್ಲ. ಸ್ಮಾಲೆನ್ಸ್ಕ್ ರೈಲ್ವೆ ಮುಷ್ಕರದಲ್ಲಿ ಹತ್ತು ವರ್ಷಗಳಿಗೆ ಹಿಂದೆಯೇ ಅವನು ಗುಂಡು ತಗಲಿ ಸತ್ತುಹೋದ'' ಎಂದ. ದಂಪತಿಗಳು ಕಿವಿಗೊಟ್ಟು ಕೇಳುತ್ತಿದ್ದರದನ್ನು.

ಗಾರ್ಡ್ ಪ್ರಶ್ನಿಸಿದ: "ನಾನು ಉಕ್ರೇನಿನವ, ಕ್ರಿಶ್ಚಿಯನ್....ನೀವು ಮುಸಲ್ಮಾನರೆ?''

"ಹೌದು''

"ನಾನು ಮುದುಕ....ಕುತೂಹಲದಿಂದ ಕೇಳಿದೆ. ಕೋಪ ಮಾಡಬೇಡಿ''

"ಕೋಪನೇಕೆ ಮಾವ? ನಾವೆಲ್ಲ ಸೋವಿಯೆಟ್ ಜನಾಂಗದವರಲ್ಲವೆ?''

....ಗಾರ್ಡ್ ಒತ್ತಾಯಿಸಿದ, ಅವರಿಬ್ಬರೂ ತನ್ನ ಜತೆಯಲ್ಲಿ ಚಾ ಕುಡಿಯಬೇಕೆಂದು. ಕಿರಿಯರು ನಿರಾಕರಿಸಲಿಲ್ಲ.

ಮಧ್ಯರಾತ್ರಿ ಕಳೆದು ಒಂದು ಘಂಟೆಗೆ ರೈಲು ಹೊರಟಿತು. "ಮುಂದಿನ ರಜೆಯವರೆಗೆ'' ಫೈಜಲ್-ಖೋಸಿಯತ್ ಪರಸ್ಪರ ಬೀಳ್ಕೊಟ್ಟರು.

ಬಲು ನಿಧಾನವಾಗಿ ತೂಕಡಿಸುತ್ತ-ಆಕಳಿಸುತ್ತ ಗುಡ್ಡ ಕಾಡುಗಳಲ್ಲಿ ಏರಿ ಇಳಿದು ರೈಲು ಸಾಗಿತು.

ಅಯ್ಯನ್ನೆ !

....ತನ್ನ ಹದಿನಾಲ್ಕನೆಯ ವಯಸ್ಸಿನಲ್ಲಿ ಖಾಜಾನೊಡನೆ ಮದುವೆ ....ಆ ಮೊದಲ ರಾತ್ರಿ....ಆರು ತಿಂಗಳ ಬಳಿಕ....ಖಾಜಾ ಟಾಷ್ಕೆಂಟಿಗೆ ದುಡಿಯಲು ಹೋಗಿ ತೀರಿಕೊಂಡ....ಅದೇ ಟಾಷ್ಕೆಂಟಿಗೆ ತಾನು ಕಲಿಯಲು ಹೋಗುತಿದ್ದಾಳೆ....

ಹಳೆಯ ಅಧ್ಯಾಯ ಅದು. ಪ್ರತಿಯೊಂದು ಹೊಸ ದಿನದ ಉದಯವಾದಾಗಲೂ ಆ ಸ್ಮರಣೆ ಹಿಂದೆ-ಹಿಂದೆ ಸರಿಯುತಿತ್ತು; ಗತ ಜೀವನ ಮರೆಯುತಿತ್ತು.

ಒಂದು ರಾತ್ರಿ, ಒಂದು ಹಗಲು, ಮತ್ತೊಂದು ರಾತ್ರಿ—ಅಷ್ಟು ಪ್ರಯಾಣ. ಟಾಷ್ಕೆಂಟ್ ಕಣ್ಣಿಗೆ ಬಿದ್ದಾಗ ಬೆಳಕು ಸರಿಯಾಗಿ ಹರಿದಿತ್ತು!



ಫೆಬ್ರುವರಿ, ೧೯೪೫



# ನೀಮಾ! ನೀಮಾ!

ಇನ್ನು ಅಗಲುವುದು. ಲಹರಿ ಕಿವಿ ಹಿಡಿದು, "ಇನ್ನು ನಾಳೆ ನೆಪ್ಪಿರಲಿ," ಎಂದ. ನೋವಿಗೆ 'ಆಯ್' ಎಂದು ಕುಂಯ್‌ಗುಟ್ಟಿದರೂ "ಏ" ಎಂದು ನಾಲಿಗೆ ಹೊರಚಾಚಿ ಅಣಕಿಸಿದಳು ನೀಮಾ.

ನೀಮಾ ಬಾಗಿಲನ್ನು ಹಿಂದಕ್ಕೆ ತಳ್ಳಿದಳು. ಉದ್ದುದ್ದ ನೆರಳುಗಳು ಗೋಡೆಯ ಮೇಲೆ ನರ್ತಿಸುತ್ತಿದ್ದುವು. ಏನು ದೀಪ! ಏಕೋ ಅಂಜಿದ ನೀಮಾ, ತನ್ನ ರೋಗಗ್ರಸ್ತ ತಂದೆ ಮಲಗಿದ್ದ ಮಂಚವನ್ನು ನೋಡಿದಳು. ತಂದೆ ನರಳುವ ಸದ್ದು ಕೇಳಿ ಬರಲಿಲ್ಲ. ನೀಮಾ ಆ ಜಡದೇಹವನ್ನು ಹಿಡಿದು ನೋಡಿದಳು. ಹೌದು; ದೇಹ ಜಡವಾಗಿತ್ತು. ಹೆಪ್ಪು ಕಟ್ಟಿತ್ತು; ಹೆಣ ಮರವಾಗಿತ್ತು. ಚಿಟ್ಟನೆ ನೀಮಾ ಚೀರಿದಳು; ತಂದೆ ತೀರಿಕೊಂಡಿದ್ದರು. ಅಯ್ಯೋ ಭೂಕಂಪ! ಲಹರಿ ಅದೇ ಆಗ ಒರಿಸ್ಸಾ-ಬಿಹಾರುಗಳ ಭೂಕಂಪದ ಕಥೆ ಹೇಳುತ್ತಿದ್ದನಲ್ಲವೆ?

ನೀಮಾ ಸ್ಥಿತಪ್ರಜ್ಞಳು; ಪ್ರಜ್ಞಾ ಶೂನ್ಯಳು.

o o o o o

ಅಂತ್ಯಕ್ರಿಯೆ ನಡೆದು ಹೋಯಿತು.

ಲಹರಿ ಹಟತೊಟ್ಟಿದ್ದ. ಅವನಮ್ಮ ಒಲ್ಲೆ ಎನಲಿಲ್ಲ. ಮತ್ತೆ ತಂದೆಯನ್ನು ಕೇಳುವುದೇನು? ನೀಮಾ, ಎಂಟೊಂಭತ್ತು ವರ್ಷದ ಹುಡುಗಿ ನೀಮಾ, ಲಹರಿಯ ಮನೆ ಸೇರಿದಳು.

"ಅನಾಥೆ ಮಗಳೆ! ನನಗೆ ನೀನು ಬೇರೆಯಲ್ಲ; ಲಹರಿ ಬೇರೆಯಲ್ಲ" ಎಂದಳು ಲಹರಿಯ ಅಮ್ಮ, ಮಗಳು ನೀಮಳ ಕುರುಳನ್ನು ನೇವರಿಸುತ್ತಾ.

ಲಹರಿಯ ಹಾಸಿಗೆಯನ್ನು ಅಮ್ಮ ಬಿಚ್ಚಿದಳು. ಒಂದೊಂದಾಗಿ ಬಟ್ಟೆಯನ್ನು ಲಹರಿ ಎತ್ತಿದ. ವಿಭಾಗವಾಗಬೇಕಿನ್ನು; ಲಹರಿಗೊಂದು ನೀಮಳಿಗೊಂದು. ಹೀಗೆ ಎರಡು ಹಾಸಿಗೆಗಳು!

ಆ ರಾತ್ರಿ ನೀಮಾ ನಿದ್ರಿಸಲಿಲ್ಲ.

o o o o o

ಮುಂಜಾವದಲ್ಲೇ ಎದ್ದು ಲಹರಿಯ ತಂದೆ ದುಡಿತಕ್ಕೆ ಹೋಗುವರು. ತಲೆಯ ಮೇಲೊಂದು ಟೊಪ್ಪಿಗೆ; ಬಿಡಿಸಿ ಆಗಲಿಸಿದ ಮೀಸೆ; ಕಾಲಲ್ಲಿ ಮೊಣಕಾಲುತನಕದ ಬೂಟ್ಸುಗಳು. ಮತ್ತೆ ಕೈಯಲ್ಲಿ ಚಾಟಿ-ಚಮ್ಮಟಿಕೆ.

ಒಂದು ದಿನ ನೀಮಾ ಕಾಕನ ವೇಷವನ್ನು ಕಂಡಳು. ಲಹರಿಯನ್ನೂ ಎಚ್ಚರಿಸಿ "ನೋಡು-ನೋಡು" ಎಂದಳು. 'ಊ' ಎಂದ ಲಹರಿ ನಿದ್ದೆಯಲ್ಲಿ.

ಕಾಕ ಹೊರಟುಹೋದ ಮೇಲೆ, "ಅಮ್ಮ, ಕಾಕನಿಗೆ ಕೈಯಲ್ಲಿ ಆ ಚಾಟಿಯೇಕೆ?" ಎಂದು ನೀಮಾ ಕೇಳಿದಳು.

"ಬೇಗನೆ ಏಳದೆ, ಸೋಮಾರಿಯಾಗಿ ನಿದ್ದೆ ಹೋಗುವ ಕೂಲಿಯನ್ನು ದಂಡಿಸಲಿಕ್ಕೆ" ಎಂದರು ಅಮ್ಮ.

ಸೋಮಾರಿ!

"ಏ ಬೇಗನೆ ಏಳದ ಸೋಮಾರಿ" ಎಂದು ನೀಮಾ ಲಹರಿಯ ಹಾಸಿಗೆಯ ತುದಿಯನ್ನು ಹಿಡಿದಳು, ಎಳೆದಳು.

"ನೋಡಮ್ಮ!" ಎಂದು ಲಹರಿ ದೂರು ಕೊಟ್ಟ.

ಲಾಟಾನಿನ ಉರಿಯನ್ನು ಕಿರಿದುಗೊಳಿಸುತ್ತಾ "ಬೆಳಗಾಗುವುದಕ್ಕೆ ಇನ್ನೂ ಹೊತ್ತಿದೆ; ಮಲಗಿ ಮಕ್ಕಳೆ," ಎಂದರು ಅಮ್ಮ.

o o o o o

ಆ ವರ್ಷ ನೀಮಾ ಮನೆಯಲ್ಲೆ ಓದು ಕಲಿತಳು. ಲಹರಿಯೇ ಪಾಠ ಹೇಳಿಕೊಡುವ ಮಾಸ್ತರ. ಲಹರಿ ಮನೆಗೆ ಬಂದೊಡನೆ "ನಮಸ್ತೆ,

ಮಾಸ್ತರ್ ಮಹಾಶಯ್'' ಎನ್ನಬೇಕು ನೀಮಾ. ಇಲ್ಲವಾದರೆ ಆ ದಿನ ಪಾಠವಿಲ್ಲ; ಜತೆಯಾಗಿ ಆಟವಿಲ್ಲ.

ಮುಂದಿನ ವರ್ಷ ಇಬ್ಬರನ್ನೂ ಒಂದಾಗಿಯೇ ಕಾಕ ಶಾಲೆಗೆ ಕಳುಹ ತೊಡಗಿದರು. ಕೊಂಚ ದೂರದಲ್ಲಿತ್ತು ಶಾಲೆ. ಮಧ್ಯಾಹ್ನದೂಟ ಕಾಕನ ಚಾತೋಟದ ವಸತಿಯಲ್ಲಿ. ತೋಟದಲ್ಲಿ ದುಡಿಯುತ್ತಿದ್ದ ಸಾವಿರಾರು ಆಳುಗಳ ಮೇಸ್ತ್ರಿಯಲ್ಲವೆ ತಮ್ಮ ಕಾಕ?...ಸಂಜೆಯ ಹೊತ್ತಿಗೆ ಲಹರಿ-ನೀಮರು ಚಾತೋಟದ ತಪ್ಪಲನ್ನೇರಿ, ಗಿರಿ ಕಂದರಗಳಲ್ಲಿ ಸುತ್ತಾಡಿ, ಮನೆಗೆ ಮರಳುವರು. ಅತ್ತ ಸ್ವಲ್ಪ ದೂರದಲ್ಲಿ ತನ್ನ ವಿರಾಟ ರೂಪವನ್ನು ಪ್ರದರ್ಶಿಸುತ್ತ ಎದ್ದು ನಿಂತಿದ್ದ ತೇಜೋಮಯ ಹಿಮಾಲಯ ಧವಳ ರಾಶಿ. ಅದನ್ನೇ ನೋಡುತ್ತ ಒಮ್ಮೊಮ್ಮೆ ಅವರಿಬ್ಬರೂ ಮನೆ ಯನ್ನು ಮರೆತುಬಿಡುವರು....ಮತ್ತೆ ಪುನಃ ತಮ್ಮ ಗುಡಿಸಲನ್ನು ಸೇರು ತ್ತಿರುವ ಚಾತೋಟದ ಕೂಲಿಗಳ, ''ದಿನ ಕಳೆಯಿತೂ ಒಂದು ದಿನಾ'' ಹಾಡು ಅವರನ್ನೆಚ್ಚರಿಸುವುದು.

o o o o o

ಆ ದಿನ ಮಧ್ಯಾಹ್ನ ಶಾಲೆ ಬಿಟ್ಟು ನೀಮಾ-ಲಹರಿ ಕಾಕನ ವಸತಿಗೆ ಹೋದಾಗ ಆಗಲಿನ್ನೂ ಊಟ ಬಂದಿರಲಿಲ್ಲ. ಯಾರೋ ಒಬ್ಬ ಆಳು ಅನ್ನ ತರಲು ಹೋಗಿದ್ದ. ಮಕ್ಕಳು ಕಾದು ನಿಲ್ಲಬೇಕಾಯಿತಲ್ಲ! ಕಾಕ ಸಿಟ್ಟಾದರು. ಸ್ವೈರಣೆಗೆಟ್ಟರು. ಅತ್ತಿಂದಿತ್ತ ಶತಪಥ ತುಳಿದರು.

ಆಳು ತಡವಾಗಿ ಬಂದಾಗ ಅವನ ಮೇಲೆ ಚಾಟಿ ಪ್ರಯೋಗ ವಾಯಿತು. ರಪ್, ರಪ್, ರಪ್! ನೀಮಾ ಕಣ್ಣು ಮುಚ್ಚಿಕೊಂಡಳು. ಲಹರಿ ತಲೆಬಾಗಿಸಿದ. ಎಂತಹ ಕ್ರೂರಿ ಅವರ ಕಾಕ! ಇಬ್ಬರಿಗೂ ಆ ದಿನ ಅನ್ನ ಸೇರಲಿಲ್ಲ.

ಸಂಜೆ ಆಟವೂ ಇಲ್ಲ ಆ ದಿನ. ರಾತ್ರಿ ಹೊತ್ತು ಮ್ಲಾನವದನರಾಗಿ ಮಕ್ಕಳು ಹಿಂದಿರುಗುತ್ತಿದ್ದಾಗ ಅವರು ಕಾಣಸಿಕ್ಕಿದರು. ಸಣ್ಣ ಕೈ ಕಾಲುಗಳ ದೊಡ್ಡ ಹೊಟ್ಟೆಯ ಮಗು, ತಾಯಿಯ ಎದುರುಗಡೆ ನಡೆಯು

ತ್ತಿತ್ತು. ಹಿಂಬದಿಯಿಂದ ಗಾಯಗೊಂಡಿದ್ದ ಗಂಡ ಜೋಲುತ್ತಾ ಬರು ತ್ತಿದ್ದ. ಆ ದಿನ ಮಧ್ಯಾಹ್ನ ಕಾಕನ ಕೋಪಕ್ಕೆ ಬಲಿಯಾಗಿದ್ದವನು. ತಲೆಗೆ ಬ್ಯಾಂಡೇಜಿತ್ತು. "ನಾವು ಶಾಲೆಗೆ ಹೋದಮೇಲೆ ಪುನಃ ಕಾಕ ಹೊಡೆದಿರಬೇಕು," ಎಂದಳು ನೀಮಾ. ಲಹರಿ ದುಃಖದಿಂದ "ಇರಬ ಹುದು" ಎಂದ. ಆ ಹೆಂಗಸು ಮೇಸ್ತ್ರಿಯ ಮಕ್ಕಳಿಬ್ಬರನ್ನೂ ದುರದು ರನೆ ನೋಡಿದಳು.

ಮನೆ ಸೇರಿದೊಡನೆ, ಇದಿಗೊಂಡು ಮೈ ತಡವೃತ್ತ ಅಮ್ಮ ಹೇಳಿ ದಳು: "ಈ ದಿನ ಊಟ ತಡವಾಯಿತು ಅಲ್ಲವೆ ಮಕ್ಕಳೆ? ಆ ಕೆಟ್ಟ ಕಪಿಲೆ ಹಸು ಎಲ್ಲೋ ತಪ್ಪಿಸಿಕೊಂಡು ನನ್ನ ಕೆಲಸಕ್ಕೆ ತಡೆ ಮಾಡಿತು."

o o o o o

ಸುಲೂ—ಅದು ಅವಳ ಹೆಸರಂತೆ. ಗಾಯಗೊಂಡ ಕೂಲಿಯ ಪತ್ನಿ. ನೀಮಾ—ಲಹರಿಯರು ಅವಳ ಮನೆಯನ್ನು ಹುಡುಕಿ ಹಿಡಿದರು. ಅದು ಮನೆಯೆ? ಆದರೂ ಅವರ ಗೆಳೆತನ ಬೆಳೆಯಿತು.

ನೀಮಾ ಬೆಳೆಯುತ್ತಿದ್ದ ಹುಡುಗಿ. "ಹೀಗೇ ಬೆಳೆಯಲಿ....ಲಹರಿಗೆ ಜತೆಯಾಗುವಳು" ಎಂದರು ಅಮ್ಮ ಒಂದು ದಿನ. ಕಾಕ ಹೂಂಕರಿಸಿ ದರು. ನೀಮಳ ತಂದೆಯ ಸ್ಥಾನವೆಲ್ಲಿ? ತನ್ನದೆಲ್ಲಿ? ಹಿರಿಯ ಕೂಲಿಯ ಮಗಳನ್ನು ಮೇಸ್ತ್ರಿಯ ಮಗನಿಗೆ ತರುವುದೆ? ಭಿಕಾರಿ ಹುಡುಗಿ........ ಎಲ್ಲಾದರೂ ಇರುತ್ತಾಳೆ....

....ಈ ಹುಡುಗನ ಅವಸ್ಥೆಯೇನು?" ಎಂದುಕೊಳ್ಳುವಳು ಅಮ್ಮ ಒಮ್ಮೊಮ್ಮೆ. 'ನೀಟಾಗಿ-ಸುಟಿಯಾಗಿ' ಪುಷ್ಟನಾಗಿ ಬೆಳೆದಿದ್ದಾನೆ. ಆದರೆ ಇಷ್ಟು ಸಪ್ಪೆ ಮೋರೆಯೇಕೆ?

ನಕ್ಕಾಗ ಮಗುವಿನಂತೆ ತಿಳಿ ನಗು. ಇಲ್ಲದೆ ಹೋದರೆ ಗಂಭೀರ ಮುಖ. ಓದು-ವ್ಯಾಸಂಗ-ಪಾಠವನ್ನು ಬದಿಗಿಟ್ಟು, ಇತರ ಪುಸ್ತಕಗಳ ವ್ಯಾಸಂಗ ಬಲವಾಗಿ ನಡೆದಿತ್ತು. ಆ ಹದಿನೈದು ಹದಿನಾರನೆಯ ವಯ ಸ್ಸಿನಲ್ಲಿ ಎಷ್ಟು ಚಂದವಾಗಿ ಕಾಣಿಸುತ್ತಿದ್ದ ಲಹರಿ!

ಹದಿಮೂರು ವಯಸ್ಸಿನ ನೀಮಳೂ ಏನೂ ಕಡಿಮೆಯಿಲ್ಲ. ಮಾಟವಾಗಿ ಕಾಣುತ್ತಿದ್ದಳು. ಆಳವಾದ ಭಾವನೆಯನ್ನು ತೋರಿಸುತ್ತಿದ್ದ ಅಂದವಾದ ಎರಡು ಕಣ್ಣು ; ತಿದ್ದಿದ ಉದ್ದನೆಯ ಮೂಗು ; ತುಂಬಿದ ಗೆಲುವಿನ ಮುಖ. ಸಾಲದುದಕ್ಕೆ ತೆಳ್ಳನೆಯ ಎತ್ತರ ಶರೀರ. ಮುತ್ತೈದೆ ಯರು ಮೂಗು ಮುರಿಯುವಂತಿತ್ತು.

ಒಮ್ಮೊಮ್ಮೆ ಸಂಜೆ ತಪ್ಪಲಿನಿಂದ ನೀಮ-ಲಹರಿಯರು ತಡವಾಗಿ ಇಳಿಯುತ್ತಿದ್ದರು. ಹುಣ್ಣಿಮೆ ಬರುತ್ತಿದ್ದಾಗಲಂತೂ ಕಾಕ ನಡುವಿರು ಳಿಗೆ ಮನೆ ಸೇರುವುದಕ್ಕೆ ಕೊಂಚ ಮುಂಚಿತವಾಗಿ ಇವರು ಹಿಂದಿರುಗು ವರು. ಎಷ್ಟೋ ವೇಳೆ ಸಲೂ ಮನೆಯಲ್ಲಿ ಮಾತನಾಡುತ್ತಾ ಕುಳಿತಾಗ ಎಲ್ಲವೂ ಮರೆತುಹೋಗುತಿತ್ತು. ಸಲೂ ದನಿ ತೆಗೆದು ಹಾಡುವಳು. ನೀಮ-ಲಹರಿಯರು ಸ್ವರ ಕೂಡಿಸುವರು. ಮತ್ತೆ ಒಮ್ಮೊಮ್ಮೆ ನೀಮ ನರ್ತಿಸುವಳು. ಹೌದು ನರ್ತನ ಬರುತಿತ್ತು ಆಕೆಗೆ. ಆಕೆ ಜನ್ಮತಃ ಕಲಾ ವಿದೆ! ಕಲಿತುದಿಲ್ಲ-ಏನಿಲ್ಲ; ಯಾವ ಶಾಸ್ತ್ರೀಯ ನೃತ್ಯವೂ ಅಲ್ಲ. ಆದರೂ ತಾಳ ಲಯಬದ್ಧವಾಗಿ ನೀಮಾ ಕುಣಿಯುವಳು.

ಅಂತಹ ಒಂದು ದಿನ ಮನೆಗೆ ಬರುತ್ತಿದ್ದಾಗ ಲಹರಿ ಹೇಳಿದ— "ನೀಮಾ ನೀನಿನ್ನು ಸೀರೆಯುಡಬೇಕು. ಸಾಕು ಈ ಲಂಗ." ಅಮ್ಮ ತನಗಾಗಿ ಒಂದು ಆಕಾಶ ಬಣ್ಣದ ಚಿಕ್ಕ ಸೀರೆಯನ್ನು ತರಿಸಿಟ್ಟುದನ್ನು ನೀಮಾ ಮನೆಯಲ್ಲಿ ನೋಡಿದಳು.

○ ○ ○ ○ ○ ○

ಆ ಬೆಟ್ಟದ ತುದಿಯಲ್ಲಿ ನೀಲ ಆಕಾಶವನ್ನು ನೋಡುತ್ತಾ ನೀಮಾ ಕುಳಿತಿದ್ದಳು. ಲಹರಿ ಆ ದಿನ ಬಂದಿದ್ದ ಹಿಂದಿನ ದಿನದ ಪತ್ರಿಕೆಯೋದಿ ಮುಗಿಸಿದ. ತಲೆಯೆತ್ತಿ "ನೆಹರೂ ಕರೆಕೊಟ್ಟಿದ್ದಾರೆ....ಚೀನಕ್ಕೆ ನಾವು ನೆರವು ಕಳಿಸಬೇಕು" ಎಂದ.

ನೀಮಾ ಕಣ್ಣುಗಳನ್ನರಳಿಸಿ ಕುತೂಹಲಿಯಾಗಿ ಕೇಳಿದಳು.

ಲಹರಿ ದೀರ್ಘ ಕಥೆಯನ್ನು ಮೊದಲು ಮಾಡಿ ಮುಗಿಸಿದ. ಅಂಥ ಸೈನ್ಯಸರ್ವಾಧಿಕಾರಿ ಜಪಾನಿನೊಡನೆ ಜೀವನ ಮರಣ ಹೋರಾಟದಲ್ಲಿ ನಿರತವಾಗಿದ್ದ ಚೀನದ ಧೀರ ಕತೆ. ಮತ್ತೆ, ಒಂದು ತಂಡ, ಚೀನದಲ್ಲಿ ಸಮತಾವಾದವನ್ನು ಸ್ಥಾಪಿಸಲು ಯತ್ನಿಸಿ, ಸ್ವಲ್ಪಂಶ ಯಶಸ್ವಿಯಾದ ವಿಚಾರ.

ಮಾನವ ಸಮಾಜದ ಹುಟ್ಟು ಬೆಳವಣಿಗೆಯನ್ನು ಲಹರಿ ವಿವರಿಸ ಹೋದ. ಶೋಷಣೆ-ಅನ್ಯಾಯವಿಲ್ಲದ ನೂತನ ಸೃಷ್ಟಿಯನ್ನು ಕಾಣುವುದು ಎಷ್ಟು ಮಧುರ!

ಅಂತಹ ರಾಜ್ಯದಲ್ಲಿ ಅವರ ಕಾಕ, ಆಳುಗಳನ್ನು ಸುಲಿದು ತಿನ್ನುವ ಮೇಸ್ತ್ರಿಯಾಗಿರಲಾರ. ದೇಶಕ್ಕಾಗಿ ಜನರಿಗಾಗಿ-ತಮಗೆಲ್ಲರಿಗಾಗಿ ಚಾ ಬೆಳೆಸುವ ಕೆಲಸ ಸಾಗುವುದು! ಸಾವಿರಾರು ಮೈಲುಗಳಾಚೆ ಲಿವರ್ ಪೂಲ್-ಡೆವನ್‌ಶಯರ್‌ಗಳಲ್ಲಿ ಕುಳಿತಿದ್ದ ಸಾಮ್ರಾಜ್ಯವಾದಿ ಬಿಳಿಯನೊಬ್ಬನಿಗೆ, ನಮ್ಮ ಜನ ತೇದು ಬೆಳೆಸುವ ತೇಯೆಲೆಯ ತೋಟದ ಹಣ ಹೋಗದು........

ನೀಮಾ ಇದನ್ನೆಲ್ಲಾ ಕಿವಿಗೊಟ್ಟು ಕೇಳುವಳು. ಎಷ್ಟು ನಿಜವಾದುದು! ಜತೆಯಲ್ಲೇ "ಎಷ್ಟು ಚೆನ್ನಾಗಿ ಮಾತನಾಡುತ್ತಾನೆ ನನ್ನ ಲಹರಿ!"

ಲಹರಿ ಎದ್ದು ನಿಂತು ಹೇಳಿದ: "ನೀಮಾ ಇದು ಅಸ್ಸಾಂ-ಇದರಾಚೆ ಟಿಬೆಟ್; ಇತ್ತ ಬರ್ಮಾ-ಚೀನಾ. ಈ ಕಡೆ ಸವಿಸ್ತಾರವಾದ ಭರತ ಭೂಮಿ. ಮೂವತ್ತೈದು ಕೋಟಿ ಸರ್ಕಸ್ಸಿನ ಸಿಂಹಗಳು ಇಲ್ಲಿ ಜೀವಿಸುತ್ತಿವೆ. ಚಮ್ಮಟಿಕೆಯ ಬಲವಾದ ಒಂದು ಏಟು ಸಾಕು. ಸಿಂಹಗಳೆದ್ದು ಭೋರ್ಗರೆದು ವಿದೇಶೀಯ ಮರ್ದಕರನ್ನು ಹೊರಹಾಕಲು, ಸ್ವದೇಶದ ಸ್ವಾರ್ಥಿಗಳನ್ನು ಹತ್ತಿಕ್ಕಲು, ಎಷ್ಟುಹೊತ್ತು ಬೇಕು?"

ನೀಮಳಿಗೆ ಕಾಕನ ಚಮ್ಮಟಿಕೆಯು ನೆನಪಾಯಿತು.

ರಾತ್ರೆ ನೀಮಾ ಮತ್ತು ಲಹರಿ ಮನೆಗೆ ಬಂದಾಗ ಚಮ್ಮಟಿಕೆ ಎತ್ತಿ ಕಾಕ ನಿಂತಿದ್ದರು. "ಏನಿಷ್ಟು ಹೊತ್ತು? ಸುಲಿದುಬಿಡುತ್ತೇನೆ!" ಎಂದು

**ಗರ್ಜಿಸಿದರು....ಲಹರಿ ಒಳಬರುತ್ತ "ನೋಡು ನಿನ್ನ ಕಾಕನನ್ನು....ಅವನು ನಮ್ಮ ಕೆಟ್ಟ ಸಮಾಜದ ಒಂದು ಉತ್ಪನ್ನ...." ಎಂದ.**

ಲಹರಿಗೆ ಮತ್ತೆ ಆ ಊರಲ್ಲಿ ವಿದ್ಯಾಭ್ಯಾಸವಿರಲಿಲ್ಲ. "ನನಗಿಷ್ಟೆ ಸಾಕು" ಎಂದಳು ನೀಮಾ. ಕಾಲೇಜಿನಲ್ಲಿ ಕಲಿಯಲೆಂದು ಲಹರಿ ಶಿಲ್ಲಾಂಗಿಗೆ ಹೋಗಲು ಹೊರಟ.

"ಸದ್ಯಃ ಇವರ ಜೋಡಿ ಬೇರ್ಪಡಲಿ" ಎಂದು ಕಾಕ ಸುವತಿ. ಕೊಟ್ಟರು. ಅಮ್ಮ ಬಿಕ್ಕಿಬಿಕ್ಕಿ ಅತ್ತು, ಅಕ್ಕರೆಯಿಂದ ಬೀಳ್ಕೊಟ್ಟಳು.

ನೀಮ ಅಳುತಿದ್ದಳು.

"ಮಾಸ್ತರ್ ಮಹಾಶಯ್ ಹೋಗುತ್ತಾರೆ. ನಮಸ್ಕಾರ ಕೊಡು ತಪ್ಪದೆ ಪತ್ರ ಬರೆಯುತ್ತಾರೆ—ಓದಲು ಪುಸ್ತಕ ಪತ್ರಿಕೆ ಕಳಿಸುತ್ತಾರೆ" ಎಂದ ಲಹರಿ. 'ಊಹುಹು-ಇಹಿಹಿ' ಎಂದಳು ನೀಮಾ ಅಳುತ್ತ, ನಗುತ್ತ.

ಒಂದು ವರ್ಷ ಹಾಗೆ ಕಳೆಯಿತು. ನೀರಸ ಜೀವನದ ಕಹಿಯುಂಡಳು ನೀಮಾ.

ಯುದ್ಧ ! ಯುದ್ಧ ! ಯುದ್ಧ ! ಎಲ್ಲರೂ ಎಂದರು. ಲೋಕವಿಡೀ ಯುದ್ಧದ ಸೊಲ್ಲು. "ಇನ್ನೊಂದು ಘೋರ ಯುದ್ಧ ; ಹತ್ಯಾಕಾಂಡದ ಆರಂಭ" ಎನ್ನುತ್ತಿದ್ದುವು ಲಹರಿ ಕಳುಹುತ್ತಿದ್ದ ಪತ್ರಿಕೆಗಳ ಶೀರ್ಷಿಕೆಗಳು. ಅಸ್ಸಾಮಿನ ಆ ಭಾಗದ ಪ್ರತಿಯೊಂದು ಗುಹೆ-ಕಂದರ-ತಪ್ಪಲು 'ಯುದ್ಧ'ವೆಂದು ಪ್ರತಿ ಧ್ವನಿ ಕೊಡುತ್ತಿತ್ತು.

ಮತ್ತೊಂದು ದಿನ ಪತ್ರ ಬಂತು. "ರಾಜಕೀಯ ಕಾರಣಕ್ಕಾಗಿ ಲಹರಿಯನ್ನು ಬಂಧಿಸಿದ್ದಾರೆ" ಎಂದು. ಜಗತ್ತು ಶೂನ್ಯವಾಗಿ ತೋರಿತು ನೀಮಳಿಗೆ. ಕಳೆದ ಬಾರಿ ರಜೆಯಲ್ಲಿ ಬಂದು ಸಕ್ಕರೆಯ ಮಾತುಗಳನ್ನಾಡಿದ್ದ ಲಹರಿ ಈ ವರ್ಷ ಎಲ್ಲಿ ಬರುವ ? ಹೇಗೆ ಬರುವ ?

"ಕುಲಟೆ" ಎಂದು ಕಾಕ ಸಿಟ್ಟನ್ನೆಲ್ಲ ನೀಮಳ ಮೇಲೆ ಕಾರಿದರು.

ಅಯ್ಯನ್ಯೆ !

" ಮಗನಿಗೆ ಈ ವರ್ಷವೇ ಒಂದು ಮದುವೆ ಮಾಡಿಬಿಡಬೇಕಿತ್ತು " ಎಂದರು ಅಮ್ಮಾ.

ನೀಮ ಅತ್ತಳು. ತನಗೆ ವ್ಯಥೆಯೇ ಇಲ್ಲವೆ? ತನ್ನನ್ನು ಯಾರೂ ಕೇಳುವವರಿಲ್ಲವೆ? ಮದುವೆಯಂತೆ! ಮದುವೆಯಲ್ಲ-ಸುಡುಗಾಡು.

ಚಾ ತೋಟವು ಸುಡುಗಾಡಾಗತೊಡಗಿತ್ತು. ಎರಡು ಮೂರು ಮುಷ್ಕರಗಳಾದುವು, ತಲೆಗಳೊಡೆದುವು, ನೆತ್ತರು ಸುರಿಯಿತು.

ಪ್ಲಾಂಟರ್ ದೊರೆ ಕಾಕನನ್ನು ಕರೆದು ಗದರಿಸಿದರು. " ಏಯ್, ನಿನ್ನ ತಲೆಯನ್ನೇ ಹಾರಿಸುತ್ತೇನೆ. ಮಗನಂತೆ ನೀನೂ ಜೈಲಿಗೆ ಹೋಗುವೆ."

ದೊರೆಯೊಡನೆ ದಯಾಭಿಕ್ಷೆ ಯಾಚಿಸಿ ಮಗನ ಬಿಡುಗಡೆಗೆ ಯತ್ನಿಸ ಬೇಕೆಂದಿದ್ದ ಕಾಕ ಇಳಿದು ಹೋದರು.

೦ ೦ ೦ ೦ ೦ ೦

ಒಂದು ದಿನ ನೀಮಾ ಹೊರಟು ಹೋದಳು. ಯಾರಿಗೂ ಬೇಡಾದವಳು-ಬಡ ಕೂಲಿಗಳಿಗೆ ಬೇಕಾದಳು. ಲೋಕದ ನಿಜರೂಪವನ್ನು ತಿಳಿಯತೊಡಗಿದ್ದ ಹದಿನೈದು ಹದಿನಾರರ ಹುಡುಗಿ.

" ಹೋಗಲಿ-ಹಾಳಾಗಿ ಹೋಗಲಿ! " ಎಂದರು ಕಾಕ. ತನ್ನ ಪಾಲಿನ ದೈವ ಕಣ್ಣು ತೆರೆದು ತನ್ನನ್ನು ಒಯ್ಯಬಾರದೆ—ಎಂದು ಅಮ್ಮ ದುಃಖಿಸಿದಳು.

ಸಲೂ ಮನೆ ನೀಮಳ ವಾಸಸ್ಥಾನವಾಯಿತು. ರಾತ್ರೆ ದುಡಿತ ಮುಗಿದಮೇಲೆ ತೋಟದ ಹೆಚ್ಚಿನ ಹೆಂಗಸರೆಲ್ಲ ಒಂದೆಡೆ ಅಲ್ಲಿ ನೆರೆಯುವರು. ನೀಮಾ ಅವರ ನಾಯಿಕೆ. ಏರುತ್ತಿದ್ದ ದವಸ ಧಾನ್ಯಗಳ ಬೆಲೆಯ ಕುರಿತು ಚರ್ಚೆಯಾಗಿ, ಅವರು ಮರುಗುವರು. ಬಳಿಕ ಎಲ್ಲವನ್ನೂ ಮರೆತು ಹಾಡುವರು, ನೀಮಾ ಜತೆಯಲ್ಲೆ ಹಾಡುವಳು; ಹಾಡಿ ಕುಣಿಯುವಳು. ಆ ದುಡಿವ ಮಂದಿಗಾಗಿ ಅವರ ಜೀವನವನ್ನು ಚಿತ್ರಿಸಿ ಗೀತಗಳನ್ನು ಬರೆವಳು.

ಬೇಕಿದ್ದರೆ ಕಾಕ ನೀಮಳನ್ನು ಅಲ್ಲಿಂದಲೂ ಓಡಿಸಬಹುದಿತ್ತು. ಆದರೆ ಏಕೋ ಅವರು ಹಾಗೆ ಮಾಡಲಿಲ್ಲ.

o o o o o o

ಜಪಾನರು ಬರುತ್ತಿದ್ದರಂತೆ, ಬರ್ಮದ ದಕ್ಷಿಣಾರ್ಧವನ್ನು ಅವರು ಆಕ್ರಮಿಸಿದರಂತೆ. ಕಲ್ಕತ್ತೆಯ ಮೇಲೆ ವಿಮಾನ ಧಾಳಿಯಾಗುವುದಂತೆ.

ಅವರು ಅಸ್ಸಾಮಿಗೂ ಬರಬಹುದು.

ಮುದುಕ ಕಾಕ ಕುಹಕದ ಮುಗುಳು ನಗೆ ನಕ್ಕರು. "ನಾನು ದೊರೆಯಾಗುವೆ ನೋಡು" ಎಂದರು ಅಮ್ಮನೊಡನೆ.

....ಒಂದು ದಿನ ಒಮ್ಮೆಲೆ ಲಹರಿ ಊರಿಗೆ ಬಂದುಬಿಟ್ಟ....ಮನೆಗೆ ಹೋಗಿದ್ದನೋ ಇಲ್ಲವೋ. ಆದರೆ ಆತ ಸಲೂನ ಮನೆ ಬಾಗಿಲಲ್ಲಿದ್ದುದು, ನೀಮಳನ್ನು ಅಪ್ಪಿಕೊಂಡುದು, ಅಷ್ಟು ನಿಜ.

"ತಪ್ಪಿಸಿದುದಲ್ಲ—ಬಿಡುಗಡೆ" ಎಂದ ಲಹರಿ.

ಎಂತಹ ಬೆಂಕಿ ಅವನ ಕಣ್ಣುಗಳಲ್ಲಿ! ಏನು ತೀಕ್ಷ್ಣ ನಗು! ಲಹರಿ ಕಟ್ಟಾಳು. ನೀಮಾ ಮುಗ್ಧೆಯಾಗಿ ಹೋದಳು. ಆಕೆ ಹಾಡಿದಳು, ಹಾಡಿ ಕುಣಿದಳು. "ಮಾಸ್ತರ್ ಮಹಾಶಯ್, ನಿಮಗೆ ಸ್ವಾಗತ ಸುಸ್ವಾಗತ!"

ಆ ದಿನ ಆರೇಳು ಸಾವಿರ ಮಂದಿ ಸಭೆ ಸೇರಿದ್ದರು ತೋಟದಾಚೆ. ಲಹರಿಯ ಭಾಷಣವನ್ನು ಮೂಕಿಯಾಗಿ ನೀಮಾ ಕೇಳಿದಳು.

"ಬರುತ್ತಿರುವವನು ಮಹಾ ಧೂರ್ತ — ಕಪಟಿ; ಎದ್ದು ನಿಲ್ಲಲಿ ನಮ್ಮ ದೇಶ! ಮರ್ದಕ ನೌಕರಶಾಹಿಗಾಗಿಯಲ್ಲ. ನಮಗಾಗಿ ಈ ನಾಡು ಉಳಿಯಬೇಕು....ನಮ್ಮ ಮನೆ-ಗುಡಿಸಲು ಉಳಿಯಬೇಕು-ಎತ್ತಿ ಹಿಡಿಯಿರಿ ಹಾರೆ, ಪಿಕ್ಕಾಸುಗಳನ್ನು! ಅದೇ ನಮ್ಮ ಆಯುಧ. ಚೀನದ ಬಂಧುಗಳಿಗಿಂತ ನಾವು ಕಡಿಮೆಯಲ್ಲವೆಂಬುದನ್ನು ತೋರಿಸಿ ಕೊಡೋಣ"–ಹಾಗೆ ಲಹರಿ ಮಾತನಾಡಿದ್ದ.

ಅಯ್ಯನ್ನೆ !

....ಯಾರೋ “ ನಿಮ್ಮ ಮಗ ಬಂದಿದ್ದಾನಲ್ಲವೆ?” ಎಂದಾಗ ಕಾಕ, “ ಇಲ್ಲ ಅವನು ಸತ್ತುಹೋದ ” ಎಂದರಂತೆ. ಆದರೆ ಅಮ್ಮ ಅದೇ ಹೊತ್ತಿಗೆ ಸಲೂನ ಮನೆಯಲ್ಲಿದ್ದರು.

ಜಪಾನರು ಬಂದು ತನ್ನ ಉದ್ಧಾರವಾಗುವುದು ಎಂದು ಕಾಕ ಭಾವಿಸುತ್ತಿದ್ದಾಗ ಲಹರಿ ಹಾಗೆ ಹೇಳುವುದೇ ?

o o o o o o

ಬಂಡಾಯದ ಝಂಝಾವಾತ ಬೀಸಿಹೋಯಿತು. ಪೋಲೀಸರು ಸಲೂನ ಮನೆಯನ್ನು ಶೋಧಿಸಿ ಹೋದರು. ಲಹರಿ—ನೀವಾ ಬಂಧನ ಕ್ಕೊಳಗಾದರು. ತೋಟಕ್ಕೆ ತೋಟವೇ ಕ್ರೋಧದಿಂದ ‘ಏ’ ಎಂದಿತು. ನೀವಾ—ಲಹರಿಯರನ್ನು ಸರಕಾರ ಬಿಟ್ಟುಕೊಟ್ಟಿತು........

ಅಸ್ಸಾಮಿನತ್ತ ಗಡಿಯಾಚೆ ಜಪಾನರ ಬಯೊನೆಟ್‌ಗಳು ಕಾದು ನಿಂತಿದ್ದುವು. ‘ ಎಂದು ನುಗ್ಗಲಿ ? ’ ಎಲ್ಲಿ ನುಗ್ಗಲಿ ? ಇತ್ತ ದಾರಿದ್ರ್ಯ ದೇವಿ ಉಗ್ರ ತಾಂಡವ ನೃತ್ಯಕ್ಕೆ ಆರಂಭಿಸಿದ್ದಳು. ಉಪವಾಸ – ಕೊಲೆರಾ – ಮಲೇರಿಯಾ.

ತಿಂಗಳುಗಳು ಉರುಳಿದುವು....

ಹಾಹಾಕಾರ ಕಿವಿಯೊಡೆಯುವಂತೆ ಹಬ್ಬಿತು.

“ ಉಳಿಸಿರಿ ಜನರನ್ನು ” ಎಂದ ಲಹರಿ, “ ನಮ್ಮ ಜನಾಂಗವೇ ನಾಶವಾಗುತ್ತಿದೆ. ”

ಹಗಲಿರುಳು ನೀವು – ಲಹರಿಯರು ದುಡಿದರು. ಕಾಳು – ಕಡ್ಡಿ ದೊರಕಿಸಲು, ದೂರದ ಬಂಗಾಳಕ್ಕೆ ನೆರವು ಕೊಡಲು, ಜನಸೇವೆಯೆಂದು ದುಡಿದರು.

o o o o o o

ಯಾರೋ ಕೇಳಿದರು : “ ಸಿಟ್ಟಾಗಬೇಡಿ. ಅಲ್ಲ....ನೀವಿಬ್ಬರೂ ಮದುವೆಯಾಗಬಾರದೇಕೆ ? ” ನೀವು — ಲಹರಿಯರು ಹೊಟ್ಟೆತುಂಬ

ನಕ್ಕಂತಾಯಿತು. ಅಯ್ಯೋ ಅವರ ಮದುವೆ ಎಂದೋ ಆಗಿತ್ತೆಂಬುದನ್ನು ಆ ಜನ ತಿಳಿಯಬಾರದೆ ?....

ಮತ್ತೆ, ಮತ್ತೆ ಒಂದು ದಿನ, ಒಂದು ದುರ್ದಿನ....ಮಲೇರಿಯಾಕ್ಕೆ ತುತ್ತಾಗಿ ಲಹರಿ ತೀರಿಕೊಂಡ. ನೀಮಾ, ನೀಮಾ ಏನು ಯಾತನೆ ನಿನಗೆ ?

ಎಲ್ಲರಿಗೂ ಅಂತಹದೇ ಯಾತನೆ, ಅದೇ ಅನುಭವ. ಮಸಣ ಯಾತ್ರೆ ಮಹಾ ಜಾತ್ರೆಯಾಯಿತು. ತೋಟದ ತೇಯೆಲೆಗಳೂ ಬಾಡಿ– ಬಳುಕಿ ಕಣ್ಣೀರಿಟ್ಟವು.

ಅಮ್ಮ ಹಾಸಿಗೆ ಹಿಡಿದಿದ್ದಳು. ನೀಮಾ ಸೊರಗತೊಡಗಿದಳು.. ಕಾಕ ಅಮಾನುಷ ಆಶೆಯನ್ನು ವ್ಯಕ್ತಪಡಿಸುವ ಮುಖ ಮಾಡಿ, ಚಮ್ಮ ಟಿಗೆಯನ್ನು ಬಲವಾಗಿ ಅದುಮಿ, ಶಕ್ತಿಮೀರಿ ಪ್ರಯೋಗಿಸುತ್ತಿದ್ದರು........

ನೀಮಾ ತೋಟದಲ್ಲಿ ದುಡಿದಳು. ಲಹರಿಯಂತೆಯೇ ಜನರೆಡೆಯಲ್ಲಿ ದುಡಿದಳು. ಪ್ರಸನ್ನ, ಪ್ರಫುಲ್ಲರು ಅವರಿಗೆ ನೆರವಾದರು. ಈ ಹುಡುಗರ ಜತೆಯಲ್ಲಿ ದೂರದ ಶಿಲ್ಲಾಂಗಿನಿಂದ ಕುಮುದಳೂ ಬಂದಿದ್ದಳು–ಕುಮುದ ನೀಮಳ ಜತೆಗಾರ್ತಿಯಾದಳು. ನೀಮ ಪ್ರಾಣಧಾರಣಮಾಡಿದಳು.

o o o o o o

ಮುಂದಿನ ಹುಣ್ಣಿಮೆಯಂದು ಮೇಳ ಜರಗಿಸುವುದೆಂದು ನಿಶ್ಚಯ ವಾಗಿತ್ತು. ಅಲ್ಲಿ ನೀಮಾ ನರ್ತಿಸಬೇಕು.

" ಕುಣಿಯುವೆ, ಕುಣಿಯುವೆ—" ಎಂದಳು ನೀಮಾ, " ನನ್ನ ಜನರ ಹಾಡಿಗೆ ಓ ಕೊಟ್ಟು ದನಿಗೂಡಿಸಿ ಕುಣಿಯುವೆ...." ಮತ್ತೆ ಅವಳೇ ಹೇಳಿದಳು: " ಲಹರಿ ಅಲ್ಲಿ ಇರಲಾರ ನಿಜ; ಆದರೆ ನೀವಿರುವಿರಿ...."

ಸಿದ್ಧತೆ ಸಂಭ್ರಮದಿಂದ ಸಾಗಿತು. ಇದೇನು ಹೊಸದು ? ಮೇಳ ವಂತೆ; ನಾಟಕ ನೃತ್ಯಗಳಂತೆ. ಸರಕಾರ ಕಣ್ಣರಳಿಸಿತು. ಪ್ಲಾಂಟರ್ ಧೊರೆ ಕಿವಿ ನಿಗುರಿಸಿದ. ಕಾಕ ಚಮ್ಮಟಿಗೆಯನ್ನು ಛಟಿಲ್ಲೆಂದು ಬಡೆದು ನೋಡಿದರು. ಕೆಟ್ಟ ಶಕ್ತಿಗಳೆಲ್ಲ ಕೆಣಕಿದುವು; ಅಣಕಿಸಿದುವು. ಆದರೆ

ತೋಟದ ಏಳೆಂಟು ಸಾವಿರ ಕೂಲಿಗಳು ಕಲ್ಲಾದರು; ಕಲ್ಲುಗೋಡೆ ಯಾದರು.

ನೀವಾ ನರ್ತಿಸುವಳು. ಮೈಕೆಂಡದಂತೆ ಕಾದಿದೆ; ತಲೆ ಭಾರ ವಾಗಿದೆ ಆಕೆಗೆ. ಕಣ್ಣು ಉರಿಯುತ್ತಿದೆ. ಆದರೂ ಆಕೆ ನರ್ತಿಸುವಳು.

ಅಂದು ಹುಣ್ಣಿಮೆ.

ನೀವಾ ಕಾಲಿಗೆ ಗೆಜ್ಜೆ ಕಟ್ಟಿದಳು. ಕುಮುದಳು ನೀಲಿ ಸೀರೆ ಯನ್ನುಡಿಸಿದಳು, ಮುಖ—ತಲೆಯುನ್ನು ಓರಣಗೊಳಿಸಿದಳು.

ಆಗ ಬಾಯೊಣಗಿತ್ತು. ಹೃದಯ ಕಂಪಿಸಿತು; ಕಾಲು ತಡವರಿಸಿತು. ಇನ್ನು ನರ್ತನದ ಜಾಗೆಗೆ ಸಾಗಬೇಕು.

"ಕುಮುದ, ನನಗೆ ಸ್ವಲ್ಪ ವಿಶ್ರಾಂತಿ ಬೇಕು" ಎಂದಳು ನೀವಾ.

"ಆಗಲಾಗಲಿ, ಇನ್ನೂ ಹತ್ತು ನಿಮಿಷ ತಡವಿದೆ...."

ಹತ್ತು ಮಿನಿಟೇನೋ ಕಳೆಯಿತು. ಹತ್ತಿರ ಬಂದು ಮೈದಡವಿ, ಕುಮುದ ಕರೆದಳು: "ನೀವಾ, ನೀವಾ, ನೀವಾ!" ಮುಗುದೆ ನೀವಾ ಓ ಕೊಡಲಿಲ್ಲ.

"ಓ ನೀವಾ!"

........ನೀಮಳಲ್ಲ; ಕುಮುದ ನರ್ತಿಸಬೇಕಾಯಿತು. ಮೇಳ ಉತ್ಸವ ಜರಗದಿರಲಿಲ್ಲ.

'ನೀವಾ ಇನ್ನಿಲ್ಲ' ವೆಂದು ಗೊತ್ತಾದಾಗ ಆ ಮುಗ್ಧ ಜನ ಜಂಗುಳಿ ಗೋಳೆಂದು ಅತ್ತಿತು. ಮತ್ತೆ ಆ ಕಣ್ಣೀರನ್ನು ಒರೆಸಿ, ಸ್ಮಶಾನ ಯಾತ್ರೆಗೆ ಹೊರಡಲೆದ್ದಿತು.

ಜನವರಿ, ೧೯೪೪





# ಇರುಳ ಛಾಯೆ !

ಅಮಲಾ, ಕಮಲಾ, ವಿಮಲಾ, ನಿರಮಲಾ—

ನಾಲ್ಕು ಹೆಮ್ಮಕ್ಕಳನ್ನು ಹೊತ್ತು–ಹೆತ್ತು ಹೊರಟು ಹೋಗಿದ್ದಳು ಆ ಸತೀಮಣಿ. ಹೊಸ ಮನೆಯನ್ನು ಸಿಂಗರಿಸುವ ಹೊತ್ತಿಗೆ, ಹಿಂದಿನ ಜೀವನದ ದಿನಗಳನ್ನೆಲ್ಲ ಗಣೇಶರಾಯರು ಎಣಿಸುತ್ತಿದ್ದರು ; ಸ್ಮರಿಸುತ್ತಿದ್ದರು.

"ಬಾ"ರೆಂದಿದ್ದರು ಕಮಲೆಗೆ, "ಬಂದು ಹೊಸ ಮನೆಯ ನೋಡು ; ಶೃಂಗರಿಸುವುದಕ್ಕೆ ನೆರವಾಗು" ಎಂದು. 'ಕೆಟ್ಟ ಹುಡುಗಿ' ಬಂದಿರಲಿಲ್ಲ. ಬಲು ನಿಧಾನವಾಗಿ ರಾಯರೇ ಆ ಕೆಲಸ ಮಾಡಿದರು.

ಮ್ಯಾನೇಜರರು ಬಂದು "ಒಂದೂವರೆ ಲಕ್ಷ ಹಂಚಿಗೆ ಮಿಲಿಟರಿ ಆರ್ಡರು ಬಂದಿದೆ. ಕಂಟ್ರಾಕ್ಟರ ತಿಮ್ಮಪ್ಪಯ್ಯನಿಗೆ ಒಪ್ಪಿಸುವೆ" ಎಂದರು. "ಹೂಂ-ಹೋಗೆ"ಂದು ರಾಯರು ಅಶಾಂತರಾಗಿ ಕೈಬೀಸಿದರು.

ಬಂದವನು ಹೋದೊಡನೆ ರಾಯರ ಮುಖದಲ್ಲೊಂದು ನಗು ಮಿಂಚಿತು. ದಿವಂಗತ ಧರ್ಮಪತ್ನಿಯ ತೈಲಚಿತ್ರದೆದುರು ನಿಲ್ಲುತ್ತ "ಕಣ್ಣೆ !" ಎಂದರವರು ಮನದಲ್ಲೆ ; "ನೋಡು ಕಣ್ಣೆ ; ನಾವು ತೀರ ಕೆಟ್ಟಿದ್ದ ಕಾಲದಲ್ಲೆ ನೀನು ಹೋಗಿಬಿಟ್ಟುದೆ? ಈಗ ನೋಡು, ಯುದ್ಧ ಈ ಬೂಂ ತಂದಿದೆ. ಅರ್ಧ ಲಕ್ಷದ ಸಾಲವನ್ನು ತೀರಿಸಿದೆನಲ್ಲ. ವಿಮಲೆಗೂ ಮದುವೆ ಮಾಡಿಸಿ, ನಿರಮಲೆಯನ್ನು ಕಾಲೇಜು ಸೇರಿಸಿದೆನಲ್ಲ.... ಒಂದೂವರೆ ಲಕ್ಷದಷ್ಟು ಬ್ಯಾಂಕಿನಲ್ಲಿಟ್ಟಿರುವೆನಲ್ಲ....ಈ ಹೊಸ ಮನೆ, ಯಾರ ಕಣ್ಣನ್ನೂ ಕುಕ್ಕಿಸಬಲ್ಲ ಹೊಸಮನೆ, ನೀನಿಲ್ಲದೆಯೇ ನಿಂತಿದೆಯಲ್ಲ........"

ಅಯ್ಯನ್ನೈ !

ಕ್ಲಬ್ಬಿನಲ್ಲಿ ಬೆನ್ನ ಹಿಂದೆ ನಕ್ಕು "ಯುದ್ಧ ಬಂದುದರಿಂದ ಬದುಕಿಕೊಂಡ" ಎಂದವರಿದ್ದರು. ರಾಯರದನ್ನು ಕಿವಿಯ ಮೇಲೆ ಹಾಕಿಕೊಳ್ಳುತ್ತಲೇ ಇರಲಿಲ್ಲ. ಆ ಮಾತಿಗೆ ಅರ್ಥವಾದರೂ ಏನು? ಯುದ್ಧದಿಂದ ಕೆಡುಕಿದೆ-ಅದು ಬರಬಾರದು, ಎಂದು ತಾವೂ ಒಪ್ಪುವುದಿಲ್ಲವೆ? ಬಂದ ಮೇಲೆ ಸ್ವಾಭಾವಿಕವಾಗಿಯೇ 'ಬೂಮ್' ಆಗಿದ್ದರೆ ಯಾರೇನು ಮಾಡುವುದು? ಬರೇ ಮತ್ಸರವಲ್ಲವೆ ಅಂತಹ ಮಾತನ್ನು ಆಡಿಸುವುದು?

ಅವರ ರಾಲ್ಸ್‌ರಾಯ್ಸ್ ವೇಗವಾಗಿ ಉರುಳುತ್ತ ಹೆಬ್ಬಾಗಿಲನ್ನು ಹಾದು ಕಾರ್ಖಾನೆಯ ಅಂಗಳಕ್ಕೆ ಹೋಗುವುದು. ನಾಲ್ಕು ಅಂತರಗಳಲ್ಲಿದ್ದ ನಾಲ್ವರು ಸಿಪಾಯಿರೂ ಯಂತ್ರಗಳಂತೆ ವಂದಿಸುವರು. ಸುಯ್ ಸದ್ದು, ತಿರುಗುವ ಗಾಲಿಗಳು, ಢಕ್–ಢಡಕ್-ಢಕ್ ಎಂದು ಆವೆ ಮಣ್ಣನ್ನು ಮುದ್ರಿಸಿ ಹಂಚಿನ ರೂಪದಲ್ಲಿ ಹೊರಹಾಕುವ 'ಪ್ರೆಸ್ಸು' ........'ಒಣಗುವ ಕೋಣೆ'ಗಳಲ್ಲಿ ಹತ್ತಾಳುಗಳಷ್ಟು ಎತ್ತರಕ್ಕೆ ಹಾಯಾಗಿ ವಿರಮಿಸುವ ಬಿಳಿ ಹಸಿ ಹಂಚುಗಳು, ಬಲು ನಿಧಾನವಾಗಿ ದುಡಿಯುವ ಸಾವಿರಾರು ಕಾರ್ಮಿಕ ವರ್ಗ.

ಹೌದು; ಬಲು ನಿಧಾನವಾಗಿ. ರಾಯರು ಎಷ್ಟೋ ವೇಳೆ ಯೋಚಿಸುವುದಿತ್ತು. ಎಂತಹ ಕುರಿಜನ ನಮ್ಮವರು! ಎಷ್ಟು ನಿಧಾನ! 'ಉತ್ಪತ್ತಿ ಮತ್ತೂ ಉತ್ಪತ್ತಿ' ಎನ್ನುವ ರಷ್ಯದ ಕಾರ್ಮಿಕರ ಕತೆಯನ್ನು ಅವರು ಕೇಳಿದ್ದರು. ಇದ್ದರೆ ಅಷ್ಟು ಚುರುಕು, ನಿಸ್ವಾರ್ಥ ಬುದ್ಧಿ ಇರಬೇಕು ಎನ್ನಿಸುವುದು ಅವರಿಗೆ. ಅವರ ಆಸೆ ಇದು: ಈ ಬಡ ದೇಶದಲ್ಲಿ ಔದ್ಯೋಗೀಕರಣ ಮಹಾಪ್ರವಾಹದಂತೆ ಬರಬೇಕು. ರಷ್ಯದ ಕಾರ್ಮಿಕರಷ್ಟೇ ನಮ್ಮ ಕಾರ್ಮಿಕರು ಚುರುಕಾಗಬೇಕು. ಅಮೇರಿಕದ ಮ್ಹಾಲಕರು, ಮ್ಯಾನೇಜರು, ಕಂಟ್ರಾಕ್ಟರು, ಫೋರ್‌ಮೆನ್‌ಗಳಷ್ಟೇ ನಮ್ಮವರು ನಿಷ್ಣಾತರಾಗಬೇಕು—ಒಳ್ಳೆಯ ಮಿಲನವಲ್ಲವೆ?

ಅದೇ ಮಾತನ್ನು ಹತ್ತು ಮಂದಿಯ ಎದುರಿನಲ್ಲಿ ಕ್ಲಬ್ಬಿನಲ್ಲಿ ರಾಯರು ಆಡಿ ತೋರಿಸಿದ್ದರು. ವೃದ್ಧರೊಬ್ಬರು ಅಪ್ರತಿಭರಾಗಿ, ಅವಾ

ಕ್ಕಾಗಿ, "ಏನು ಗಣೇಶರಾಯರೇ ! ನೀವೂ ಹೀಗೆ ಹೇಳುವುದೆ ? ರಷ್ಯದ ಪದ್ಧತಿಯೊಂದು ಬಂದು ಉದ್ಧಾರವಾಗುವುದು ಉಳಿದಿದೆ ಇನ್ನು" ಎಂದರು.

"ಏನದರಲ್ಲಿ, ಯಾಕಾಗಬಾರದು ? ನನ್ನದು ಮಾಡರ್ನ್ ಐಡಿಯಾಸ್. ರಷ್ಯವನ್ನೇ ನೋಡಿ, ನಮ್ಮವರ ಹಾಗೆ ಯಶಸ್ವಿ ಹಿನ್ನಡೆಯನ್ನಷ್ಟೇ ಮಾಡುವವರಲ್ಲ........ಅವರು ಬಲಿಷ್ಠರಿದ್ದುದರಿಂದಲೇ ಜರ್ಮನಿಯನ್ನು ನೂರಾರು ಮೈಲುಗಳ ಹಿಂದೆ ಓಡಿಸಿದರು" ಎಂದು ರಾಯರು ಮತ್ತೂ ನಾಲ್ವರ ಕಣ್ಣರಳಿಸಿದರು.

ಉಳಿದವರನ್ನು ದಂಗು ಬಡಿಸಿದೆನಲ್ಲಾ-ಎಂದು ರಾಯರಿಗೆ ಸಂತೋಷ. ಆ ದಿನದ ತಮ್ಮ ಪತ್ರಿಕೆಯನ್ನು ಭದ್ರವಾಗಿ ಕಂಕುಳಡಿಗೆ ಸೇರಿಸಿ, ನಡೆಗೋಲನ್ನೆತ್ತಿ "ಗುಡ್‌ನೈಟ್, ಜಂಟ್ಲ್‌ಮೆನ್, ಲೋಕ ಉರುಳಿದಂತೆ ನಾವೂ. ಸಮಯದ ಮುಂದೆಯೇ ಓಡಬೇಕು....ಹಿಂದೆಯಂತೂ ಬೀಳಲೇಬಾರದು that's it" ಎಂದು ನಕ್ಕರು. ಎರಡು ಹಲ್ಲು ಚಿನ್ನದವು; ಮೂರು ಬೇರೆ ಕೃತಕ; ಎರಡು ಉದುರಿ ಹೋಗಿದ್ದುವು. ಅರವತ್ತು ಸಮೀಪಿಸಿತು ಎನ್ನುತಿತ್ತು ನರೆತ ತಲೆ. ಹೆಂಡತಿ ಇದ್ದಷ್ಟು ಕಾಲ ರಾಯರು ಮೀಸೆಗೆ ಕಪ್ಪು ಬಳೆಯುತ್ತಿದ್ದರು.

ಹೆಂಡತಿಯ ಮರಣ ಅವರ ಜೀವನದ ದುಃಖ ಪೂರ್ಣ ಘಟನೆ.

ಮುಂಬಯಿಯಿಂದ ಬರಲಾಗದಿದ್ದ ಕಮಲೆಯನ್ನು ಬಿಟ್ಟು ಉಳಿದವರೆಲ್ಲ, ಮನೆಯಲ್ಲೇ ಇದ್ದರು ಆಗ....ನಿರಮಲೆಯನ್ನು ಹೆತ್ತು ಬಾಣಂತಿಯಾದಂದಿನಿಂದಲೇ ಆ ಸಾಧ್ವಿಗೆ ಸುಖವಿರಲಿಲ್ಲ. ಗರ್ಭಕೋಶದ ನೋವು. ಹತ್ತು ವರ್ಷ ಹೇಗೋ ಕಳೆದಿತ್ತು ಕಣ್ಣು ಮುಚ್ಚಿಕೊಂಡಾಗ. ರಾಯರು ಆಗ ಇದ್ದುದು ನಿಕೃಷ್ಟ ಅವಸ್ಥೆಯಲ್ಲಿ. ಗೋಳೋ ಎಂದು ಅತ್ತರು. ಮೂವರು ಮ್ಯಾನೇಜರರೂ ನಾಲ್ವರು ಕಂಟ್ರಾಕ್ಟರರೂ ಬಂದು 'ಹೀಗೂ ಉಂಟೆ ಹುಚ್ಚು ?' ಎಂದು ಟೀಕಿಸಿದರು.

"ಫ್ಯಾಕ್ಟರಿಗಳಿಗೆಲ್ಲ ಒಂದು ತಿಂಗಳು ರಜೆ" ಎಂದರು ರಾಯರು.

ಅಯ್ಯನ್ನೆ !

ಮ್ಯಾನೇಜರರು ಹೋಗಿ ಎರಡು ದಿನಗಳ ರಜೆ ಕೊಟ್ಟರು.

ಮೂರನೆಯ ದಿನ ಕಾರ್ಖಾನೆಗಳೆಲ್ಲ 'ಕೂ' ಎಂದಾಗ ಸಿರಮಲೆ ಯೊಡನೆ ರಾಯರು ಬಂದೇ ಬಿಟ್ಟಿದ್ದರು. ಒಮ್ಮೆಲೆ ಹುರಿಯ ಕರಿಮೀಸೆ ಇಳಿದು ಬಿಳಿಯಾಗಿತ್ತು. ದೇಹ ಬಳುಕಿ, ಬಾಗಿತ್ತು. ಮಾಂಸವಿಲ್ಲದಿದ್ದ ಮುಖದಲ್ಲಿ ಆಳವಾದ ಗೆರೆಗಳು ಮತ್ತಷ್ಟು ಸ್ಪಷ್ಟವಾಗಿದ್ದುವು. ತುಂಟ ಕಾರ್ಮಿಕರು ಕೆಲವರು ಮೀಸೆಯನ್ನು ನೋಡಿ ಗುಸುಗುಸು ಎಂದರು, ನಕ್ಕರು. ಹೆಂಗಸು ಕೂಲಿಗಳಷ್ಟು ಮಂದಿ ರಾಯರನ್ನು ಕಂಡು ಕಣ್ಣೀ ರಿಳಿಸಿ, ಆ ಸೌಜನ್ಯದ ಮೂರ್ತಿಯೊಡನೆ ಅನುತಾಪ ತೋರಿಸಿದರು.

ಯಾರೋ ಸೂಚಿಸಿದರಂತೆ. ರಾಯರು ಇನ್ನೊಮ್ಮೆ ಯಾರ ನ್ನಾದರೂ ಕೈಹಿಡಿಯಬೇಕು. ಉಂಟೇ ಎಲ್ಲಾದರೂ ? ರಾಯರು ಅಂತಹ ಅವಿನಯದ, ದುರ್ಜನ, ಅಜ್ಞಾನಿಯೆಂದು ಹೇಳುವವರು ಯಾರು ? ಬೇರೆ ಯಾರೋ ಕೆಲವರು "ಹೆಂಡತಿಯೇ ಬೇಕೆಂದೇನು ?" ಎಂದರಂತೆ. ಇಲ್ಲ; ಶೀಲರಾಹಿತ್ಯದ ಜೀವನವನ್ನು ರಾಯರು ನಡೆಸಲಿಲ್ಲ....

ಎರಡು ಮೂರು ವರ್ಷ. ಯುದ್ಧ ಬಂದಿತು; ಜತೆಯಲ್ಲೆ ಒರ ಬೇಕಾದುದೆಲ್ಲವೂ ಬಂದುದಾಯಿತು.

ವಿಮಲಾ ಕಾಲೇಜಿಗೆ ಹೋದಳು.

ರಾಯರ ಸಾಲ ತೀರಿತು.

ಧರ್ಮ ಪತ್ನಿಯ ವಿರಹದ ವ್ಯಥೆ ಮರೆಯಿತು.

ಜವ್ವನದಲ್ಲಿ ಮಾವನ ನೆರವಿನಿಂದ, ಆ ನಾಲ್ಕು ಕಾರ್ಖಾನೆಗಳನ್ನು ಸ್ಥಾಪಿಸಿದಾಗ ಇದ್ದ ಉತ್ಸಾಹವೇ ಪುನಃ ಅವರಲ್ಲಿ ತಲೆದೋರಿತು. ಜೀವನ ವನ್ನು ಪುನಃ ಮೊದಲಿಂದಲೇ ಅನುಭವಿಸುತ್ತಿದ್ದಂತೆ ಭಾಸವಾಯಿತು ಅವರಿಗೆ. ತನ್ನ ಜತೆಗಾತಿಯನ್ನು ನೋಡುತ್ತಾ ಅವರು ಎಲ್ಲವನ್ನೂ ಮರೆಯುತ್ತಿದ್ದರು.

ನಿರ್ಮಲಾ; ನಿರ್ಮಲ ಒಳ್ಳೆಯ ಹೆಸರು. ಆದರೆ ಚಿಕ್ಕಮಗು ವಾಗಿದ್ದಾಗ ಅವಳನ್ನು ಕಂಡು ಎತ್ತಿ-ಮುದ್ದಾಡಲು ಆಶಿಸಿದ್ದ ಸ್ತ್ರೀ-

ಪುರುಷರ ಕಾರ್ಮಿಕವರ್ಗ ಈಗ ತೀಕ್ಷ್ಣ ದೃಷ್ಟಿಯಿಂದ ನೋಡುತ್ತಿತ್ತು. "ಎಲೆ ವಯ್ಯಾರಿ!" ಎಂದರು ಕೆಲ ಕೂಲಿ ಹೆಂಗಸರು. 'ಬಿಸ್ಕೂಟಂ ಬೋಡೆ'ಯಂತೆ ಬೆಳೆಯುತ್ತಿದ್ದ ನಿರಮಲಾ ನಡೆದುಕೊಂಡು ಹೋಗುವಾಗ ಕ್ಲಾರ್ಕರ ಗುಂಪು ಕಕ್ಕಾವಿಕ್ಕಿಯಾಗಿ 'ಹರತಾಳ'ವಾಚರಿಸುತ್ತಿತ್ತು. ಆ ವಿಷಯವನ್ನೆ ಎತ್ತಿ ಕೆಲ ಸ್ತ್ರೀಯರು ಅಣಕವಾಡುಗಳನ್ನು ಕಟ್ಟಿದರು. ತರುಣ ಕಾರ್ಮಿಕರಲ್ಲಿ ಕೆಲ ತುಂಟರು ಆ ಹಾಡುಗಳನ್ನೆತ್ತಿಕೊಂಡರು.

ಒಂದು ದಿನ ಕಂಟ್ರಾಕ್ಟರು ದರ್ಪ ತೋರಿಸುತ್ತ, ಕೂಲಿಗಳನ್ನು ಬಯ್ಯುತ್ತ ಮುಂದಿನಿಂದ ಹೋದ. ರಾಯರು ತಲೆಯುಲುಗಿಸುತ್ತ, 'ಚಳಿ'ಯ ವೃದ್ಧಾಪ್ಯದ ಲಕ್ಷಣಗಳನ್ನು ತೋರಿಸುತ್ತ ಹಿಂದಿನಿಂದ ಬಂದರು. ಸಂಪೂರ್ಣ ಎಚ್ಚತ್ತು, ಸಶಕ್ತವಾಗಿ ನಾಲ್ಕು ಕಾರ್ಖಾನೆಗಳೂ ಚಲಿಸುತ್ತಿರುವುದನ್ನು ಕಂಡು ಕ್ಷೀಣವಾಗುತ್ತ ನಡೆದಿದ್ದ ಅವರ ಎದೆ ಉಬ್ಬಿ ಬಂತು. ರಾಯರು ಕೆಮ್ಮಿದರು. ಮುಖದ ಮೇಲೆ ಆತ್ಮ ಸಂತೃಪ್ತಿಯ ನಗುವಿತ್ತು.

ಆಳವಾದ ಅಭ್ಯಾಸದಿಂದ ಹೊರಬಿದ್ದ ಆಣಿಮುತ್ತುಗಳೆಂಬಂತೆ ಮಾತುಗಳನ್ನು ತೂಗಿ ತೂಗಿ ರಾಯರು ಮಾತನಾಡಿದರು: "ಈ ನನ್ನ ಕಾರ್ಖಾನೆಗಳ ವಾತಾವರಣವೇ ಬೇರೆ, ಇಲ್ಲಿನ ವಾಯುವೇ ಬೇರೆ, ಅದರ ಪರಿಮಳವೂ ಬೇರೆ".

ಕಂಟ್ರಾಕ್ಟರನೂ ಬುದ್ಧಿವಂತಿಕೆಯಲ್ಲಿ ಕಡಿಮೆಯವನಿದ್ದಿಲ್ಲ. "ಆವೆ ಮಣ್ಣಿನ ದುರ್ವಾಸನೆ ಬೇರೆ, ಹಣದ ಸುವಾಸನೆ ಬೇರೆ" ಎಂದ. ರಾಯರು ಭುಜ ಕುಲುಕಿದರು. ತೃಪ್ತಿಯೊ? ಅತೃಪ್ತಿಯೊ? ಕಂಟ್ರಾಕ್ಟರನೇನೋ ತನ್ನ ಮಾತನ್ನು ರಾಯರು ಮೆಚ್ಚಿದರೆಂದುಕೊಂಡು ನಕ್ಕುಬಿಟ್ಟ.

ವಿಮಲೆಯ ಮದುವೆಯ ಮಾತು ಬಂತು. ರಾಯರೊಮ್ಮೆ ಮದ್ರಾಸಿಗೆ ಹೋಗಿ ಬಂದರು. ಹೊಸತೊಂದು ವಸತಿಗೃಹವನ್ನು ಕಟ್ಟಲು 'ಪ್ಲಾನ್'ಗಳನ್ನು ತಯಾರಿಸಿ ತಂದರು. ನಗರದಿಂದ ಎರಡು ಮೈಲುಗಳ ದೂರದಲ್ಲಿ ಎತ್ತರದಲ್ಲಿ ಸ್ಥಳವನ್ನು ಕೊಂಡು ಆಗಿತ್ತು.

ಅಯ್ಯನ್ಸೈ !

........ತಮ್ಮ ಕಂಟ್ರಾಕ್ಟರರಲ್ಲಿ ಯಾವನೋ ಒಬ್ಬ ಯಾರೋ ಒಬ್ಬಳು ಸ್ತ್ರೀ ಕೂಲಿಗೆ ಹೊಡೆದನಂತೆ. ಅದಕ್ಕಾಗಿ ಊರು ತುಂಬ ಕರಪತ್ರ, ಪ್ರಚಾರ, ಗಣೇಶರಾಯರ ಖಂಡನೆ! ಕ್ಲಬ್ಬಿಗೆ ಹೋಗಿದ್ದ ರಾಯರನ್ನು ಎಲ್ಲರೂ ಪ್ರಶ್ನಿಸುವವರೇ. ಮುಖ ಕಪ್ಪಿಟ್ಟು, ಕೆಂಪಾಗಿ, ರಾಯರು ಧಡ ಧಡನೆ ಹೊರಟು ಬಂದರು. ಕಂಟ್ರಾಕ್ಟರರು ಮಾಡಿದ ಅನ್ಯಾಯದ ಹೊರೆ ತಮ್ಮ ಮೇಲೆ ಬರಬೇಕೆ? ಅವನು ಕೆಲಸದಿಂದ ವಜಾ ಆಗಿ ಹೋಗಲಿ !

ಊರಲ್ಲಿ ಮರುದಿನ ಪುನಃ ಕಾರ್ಮಿಕರ ಮೆರವಣಿಗೆ, ಸಭೆ: "ನಮ್ಮ ಸಂಘ ಶಕ್ತಿಗೆ ಜಯವಾಯಿತು! ದುಷ್ಟ ಕಂಟ್ರಾಕ್ಟರನಿಗೆ ಶಾಸ್ತಿಯಾಯಿತು! ಕೆಲಸದ ಮಾರಮ್ಮ ಗೆದ್ದಳು! ಕ್ರಾಂತಿಗೆ ಜಯವಾಗಲಿ!"

ರಾಯರೆಂದುಕೊಂಡರು: ಏನು ಹುಚ್ಚು? ಹೀಗೂ ಅವಮಾನವೆ? ತಾವು ಮಾಡಿದ ಒಳ್ಳಿತಿಗೆ ಕೃತಜ್ಞತೆ ಸೂಚನೆಯೂ ಬೇಡವೆ? 'ಕ್ರಾಂತಿಗೆ ಜಯವಾಗಲಿ—ಉಫ್ !'

"ಪಪ್ಪ-ಅದೇನಂತೆ?" ಎಂದು ಗೆಳೆಯ-ಗೆಳತಿಯರ ಭಾವಚಿತ್ರಗಳ ರಾಶಿಯಿಂದ ತಲೆ ಎತ್ತಿದ ನಿರಮಲಾ.

"ಪಪ್ಪಿಗಳು-ಪಪ್ಪಿಗಳು-ಅವಿದ್ಯಾವಂತ ರ್‍ಯಾಸ್ಕಲ್ಸ್"

ಆ ಕಂಟ್ರಾಕ್ಟರನನ್ನು ಕರೆದು ಪುನಃ ಕೆಲಸ ಕೊಡಿಸೋಣವೆಂದು ತೋರಿತು ರಾಯರಿಗೊಮ್ಮೆ. ಹತ್ತು ಬಾರಿ ಆ ಯೋಚನೆ ಬಂತು. "ಬೇಡ ಹೋಗಲಿ" ಎಂದುಕೊಂಡರು ಮತ್ತೆ. ಸಣ್ಣ ಮನಸ್ಸುಗಳ ಸಣ್ಣತನಕ್ಕಾಗಿ ಹಿರಿಮನಸ್ಸು ಮುದುರಿಕೊಳ್ಳಬಾರದು.

ಹೊಸ ಮನೆಯ ಯೋಜನೆ ಭರದಿಂದ ಸಾಗಿತು.

ಆ 'ಮೇ'ಯಲ್ಲಿ ವಿಮಲೆಯ ಮದುವೆ. ಪ್ರತಿ ವಾರ, ಪ್ರತಿ ತಿಂಗಳು ಬ್ಯಾಂಕಿನ ಲೆಕ್ಕಾಚಾರ ಏರುತ್ತ ಹೋಗುತ್ತಿತ್ತು. ಕೈಬಿಟ್ಟು ಖರ್ಚು ಮಾಡಲು ರಾಯರು ಹಿಂಜರಿಯಲಿಲ್ಲ. ಮದುವೆಯ ಗಲಭೆಯ ಮಧ್ಯೆ

ಹೃದಯ ಬಿರಿದುಕೊಂಡು ತನ್ನ ಹಿಂದಿನಿಂದಲೇ ಬರುವ ಕೆಲವು ಗೆಳೆಯರನ್ನು ನಿರಮಲೆ ಸಂಪಾದಿಸಿಕೊಂಡಳು. ಆ ಹೊಸ ಅನುಭವದಿಂದ ಅವಳೂ ಬೆಳೆಯತೊಡಗಿದ್ದಳು.

ಮದ್ರಾಸಿನಿಂದ ಹಿಂದಿರುಗಿದ್ದ ರಾಯರನ್ನು ಕಾಣಲು ಕಾರ್ಮಿಕ ಸಂಘದವರು ಬಂದರು. ಒಬ್ಬನು ಅಧ್ಯಕ್ಷ, ಇನ್ನೊಬ್ಬನು ಕಾರ್ಯದರ್ಶಿ. ದುರುಳ-ದುರಾತ್ಮರಿರಬೇಕೆಂದು ರಾಯರು ಭಾವಿಸಿದರು ; " ಈಗ ಬಿಡುವಿಲ್ಲ " ಎಂದು ಹೇಳಿ ಕಳುಹಿದರು.

" ಅದಾಗದು. ಅತಿ ಅಗತ್ಯ. ಕಾಣಲೇ ಬೇಕು " ಎಂದು ಚೀಟಿ ಬಂತು.

" ಬರಲಿ ಹಾಗಾದರೆ— "

ಅವರು ಬಂದರು. ಒಬ್ಬ ಕಾಲೇಜಿನ ಹುಡುಗನಂತಿದ್ದ. ಇನ್ನೊಬ್ಬ ಅವನಿಗಿಂತ ಕಟ್ಟಾಳು.

" ನೀವು-ಯಾರು ? ಹೀಗೆ ಕೂತುಕೊಳ್ಳಿ— "

ಆ ಯುವಕ ಮುಂದಾದ : " ನಾನು ನಾರಾಯಣರಾವ್, ಹಂಚಿನ ಕಾರ್ಮಿಕರ ಸಂಘದ ಅಧ್ಯಕ್ಷ. ಇವರು ಶ್ರೀ. ಶಂಕರಪ್ಪ, ಕಾರ್ಯದರ್ಶಿ ....ಸಂಘದ ಪ್ರತಿನಿಧಿಗಳಾಗಿ ಕೆಲ ಪ್ರಪೋಸಲ್ಸ್ ತಂದಿದ್ದೇವೆ........ ರಾಯರು ಟೈಪ್ ಮಾಡಿದ್ದ ಒಂದು ಕಾಗದವನ್ನು ಅವರ ಕೈಯಿಂದ ತೆಗೆದುಕೊಂಡರು. ಓದಲಿಲ್ಲ. ಬಂದಿದ್ದವರನ್ನೇ ಮಿಕಿ ಮಿಕಿ ನೋಡ ತೊಡಗಿದರು.

ಇವರೇ ಏನು ಯೂನಿಯನಿನವರೆಂದರೆ ! ಏಕೆ ? ಆ ಹುಡುಗ ನಮ್ಮ ಅಮಲೆಯ ಗಂಡ ಮದುವೆಯಾದಾಗ ಇದ್ದಂತೆಯೇ, ಕಾಣುತ್ತಾನಲ್ಲ. ಅದೇ ವಿನಯ, ಸೌಜನ್ಯ, ಸೌಶೀಲ್ಯ-ಕೂಲಿ ? ಕೂಲಿ ಇರಲಾರ.

" ಅಮ್ಮಾ-ನಿರೂ, ಮಾಣಿಯನ್ನು ಕರೆಯಮ್ಮಾ........ "

ಅಯ್ಯನ್ಯೆ !

ಮಾಣಿ, ಒಂದಿದ್ದವರಿಗೆ ಕುಡಿಯಲು 'ಪೀಯೂಷ' ತಂದು ಕೊಟ್ಟ. ನಿರಮಲಾ ಬಂದು ತಂಡೆಯ ಮೇಜಿನ ಮೇಲೊಮ್ಮೆ ಕೈಯಾಡಿಸಿದಳು. ಕ್ಷಣ ಕಾಲ ನಾರಾಯಣರಾವ್‌ಕಡೆ ಕಣ್ಣು ಹೊರಳಿಸಿ, ತುಟಿಯಲುಗಿಸಿದಳು. ಪ್ರತಿಕ್ರಿಯೆ ಇರಲಿಲ್ಲ ಅವನ ಮುಖದಲ್ಲಿ. ಒಳ ಹೋಗುತ್ತಾ, "ಬರೇ ಬ್ರೂಟ್" ಎಂದುಕೊಂಡಳೇನೋ ಹುಡುಗಿ.

"ನೀವು-ನೀವು,-ಕೇಳಿದೆನೆಂದು ಕ್ಷಮಿಸಿ, ಎಲ್ಲಿಯಾದರೂ ಉದ್ಯೋಗದಲ್ಲಿದ್ದೀರಾ?"

"ಇನ್ನೂ ದುಡಿಯಲು ಹೊರಟಿಲ್ಲ....ಕಾಲೇಜು ಮುಗಿಯಿತಷ್ಟೆ ಈ ವರ್ಷ" ಎಂದು ಅಧ್ಯಕ್ಷರಿಂದ ಉತ್ತರ ಬಂತು.

"ನೋಡಿ, ನನಗೆ ಗೊತ್ತಿತ್ತು. ಬರೇ ಕಾರ್ಮಿಕರೇ ಆದರೆ ಅವರಿಗಿಷ್ಟು ತಲೆ ಎಲ್ಲಿಂದ ಬರಬೇಕು?"

ಅಧ್ಯಕ್ಷರು ತಿದ್ದಿದರು: "ಅದು ಸರಿಯಲ್ಲ; ಕಾರ್ಯದರ್ಶಿ ಶಂಕರಪ್ಪ ದುಡಿಯುವವರೇ—"

"ನಿಜಕ್ಕೂ—?"

"ನಿಮ್ಮ ಫ್ಯಾಕ್ಟರಿಯಲ್ಲೇ ಒಬ್ಬ ಆಳು"

ರಾಯರ ಮೆದುಳು-ಮುಖವನ್ನೆಲ್ಲಾ ಮೋಡ-ಹೊಗೆ-ಮುಸುಕಿತು! ಫಕ್ಕನೊಮ್ಮೆ ತೀಕ್ಷ್ಣವಾಗಿ ಶಂಕರಪ್ಪನನ್ನು ನೋಡಿ ದೃಷ್ಟಿ ತಗ್ಗಿಸಿದರು. ತನ್ನ ಒಬ್ಬ ಆಳು ತನ್ನೆದುರೆ ಕುಳಿತು 'ಪೀಯೂಷ' ಕುಡಿದ! ಅರೆಕ್ಷಣ ನೀರವವಿದ್ದು "ನಿಮಗೇನು ಬೇಕು?" ಎಂದರು ರಾಯರು.

"ಉತ್ಪಾದನ ವಿಚಾರ ನೋಡಿಕೊಳ್ಳಲು ಕಾರ್ಮಿಕರ ಮತ್ತು ಮಾಲಿಕರ ಸಂಯುಕ್ತ ಸಮಿತಿ ಬೇಕು ಎಂದು ಆ ಪತ್ರದಲ್ಲಿ ಸೂಚಿಸಿದ್ದೇವೆ...."........ರಾಯರಿಗೆ ಆ ಮಾತು ಕೇಳಿಸುತ್ತಿರಲಿಲ್ಲ. ಅವರು ಅಂತರ್ಮುಖವಾಗಿದ್ದರು. ಎದ್ದು, "ಸರಿ, ಉತ್ತರ ಕಳಿಸುತ್ತೇನೆ,-Good morning" ಎಂದು ಬೆನ್ನು ತಿರುಗಿಸಿ ಒಳಹೋಗಿಬಿಟ್ಟರು.

ಅವರ ಮನಸ್ಸನ್ನು ಕೊರೆಯುತ್ತಿದ್ದ ವಿಚಾರವಿದು: "ಜ್ಞಾನ, ಶೀಲ, ಸೌಜನ್ಯ, ವಿನಯ-ಎಲ್ಲಾ ಇವೆ ಇವರ ಜೀವನದಲ್ಲಿ. ಆದರೆ ಬಡತನ ಒಂದೇ ಇಷ್ಟರ ಮೇಲೂ ಪ್ರೇತ ಛಾಯೆ ಬೀರಿದೆಯಲ್ಲ-ಆರ್ಥಿಕ ದೃಷ್ಟಿಯೊಂದರಿಂದಲೇ ಇವರ ಜೀವಿತ ಧರ್ಮ ಬದಲಿದೆಯಲ್ಲ...."

...."ಸಂಯುಕ್ತ ಆಡಳಿತವಂತೆ! ಫ್ಯಾಕ್ಟರಿ ಎಂದರೇನು ಕಾರ್ಮಿಕರ ಸೊತ್ತೆ—?" ಎಂದು ಹೀಯಾಳಿಸಿದರು ಮ್ಯಾನೇಜರರು. ಬೋನಸು -ತುಟ್ಟಿಭತ್ತೆ-ಹೆಚ್ಚು ಕೂಲಿಯ ಪ್ರಶ್ನೆ ಜೋರೆ ಎದ್ದಿತ್ತು.

ಕಾರ್ಮಿಕರ ತುಟ್ಟಿಭತ್ತೆಯನ್ನು ಹೆಚ್ಚಿಸಬೇಕೆಂದು ಮೊದಲೇ ಹೊಳೆದಿತ್ತು ಅವರಿಗೆ. ಉಳಿದ ಕಾರ್ಖಾನೆಗಳವರಿಗಿಂತ ಹೆಚ್ಚು ಕೊಡಬೇಕೆಂಬ ಇಚ್ಛೆ.

ವಿಮಲೆ ಮದ್ರಾಸಿನ ಕಾಲೇಜಿನಲ್ಲಿ ಕಲಿತರೆ, ನಿರಮಲೆ ಅನ್ನಾಮಲೆಗೆ ಹೊರಟಿದ್ದಳು. ಹೊಸ ಮನೆಯ ಕೊನೆಯ ಕೆಲಸವಾಗುತ್ತಿತ್ತು. ಎಷ್ಟೋ ವೆಚ್ಚ. ಕೂಡಿಸಿದರು; ಕಳೆದರು ರಾಯರು. ರೂಪಾಯಿಯಲ್ಲಿ ಎಂಟಾಣೆಗಿಂತ ಹೆಚ್ಚು ಕೊಡಲು ಅವರಿಗೆ ಸಾಧ್ಯವಿರಲಿಲ್ಲ.

ಮನಸ್ಸಿತ್ತು; ಸಾಧ್ಯವಿರಲಿಲ್ಲ.

ವಿಜೃಂಭಣೆಯಿಂದ ಹೊಸ ಮನೆಯ ಪ್ರವೇಶವಾಯಿತು.

ಅಮಲೆಯ ಗಂಡ ಕಾರು ಅಪಘಡದಲ್ಲಿ ಸಿಕ್ಕಿ ಕಾಲವಾದನಂತೆ!

ಊರಲ್ಲಿ ಕಾರ್ಮಿಕರು ದೊಡ್ಡ 'ಹೂಲಿ' ಎಬ್ಬಿಸಿದ್ದರು. "ಸಾವಿರಕ್ಕೆ ೧೮ ರೂ. ಇದ್ದುದು ೭೦ ಆಗಿದೆ. ಸೇರು ಅಕ್ಕಿಗೆ ಒಂದೂವರೆ ಆಣೆ ಇದ್ದುದು ಆರಾಣೆಯಾಯಿತು. ನಮ್ಮ ಕೂಲಿ ಎರಡು ಪಾಲಾದರೂ ಆಗುವುದು ಬೇಡವೆ?" ಎಂಬ ಘೋಷಣೆ ಎದ್ದಿತು.

ಮೂರುತಿಂಗಳ ಬೋನಸು; ಯುದ್ಧ ಭತ್ತೆ!

'ಕಾರ್ಮಿಕರಿಗೆ-ದಲಿತರಿಗೆ ಸಂಕಷ್ಟವಿದೆ ನಿಜ. ಆದರೆ ಎಣಿಕೆಗೆ ಮೀರದ ಕೇಳಿಕೆಗಳನ್ನು ಮುಂದಿಡುವುದೆ?'

ಅಯ್ಯನ್ನೆ !

ಹೊಸಮನೆಗೆ ವಿದ್ಯುದ್ದೀಪಗಳಿಲ್ಲ; ಟೆಲಿಫೋನಿಲ್ಲ. ರಾಯರು ಮದ್ರಾಸಿಗೆ ಹೋದರು. ಅಮಲೆಯೂ ತಂಗಿ ವಿಮಲೆಯಲ್ಲಿಗೆ ಬಂದಿದ್ದಳು. ಸರಕಾರದೊಡನೆ-ಅಧಿಕಾರಿಗಳೊಡನೆ ಯತ್ನ; ಸರಕಾರದ ನಿರ್ಬಂಧವನ್ನು ಮುರಿದು ವಿದ್ಯುತ್ ಸರಬರಾಯಿಯ ರಿಯಾಯಿತಿ ಕೊಡಬೇಕಾಗಿತ್ತು.

ವಿಜಯಿಯಾಗಿ ವೃದ್ಧರಾಯರು ಹಿಂದಿರುಗಿದಾಗ ಪ್ರಧಾನ ಮ್ಯಾನೇಜರರು ರೈಲುನಿಲ್ದಾಣಕ್ಕೆ ತಂದ ವಾರ್ತೆ ಬೇರೆಯೇ; ಫ್ಯಾಕ್ಟರಿಗಳಲ್ಲಿ ಮುಷ್ಕರವಾಗಿತ್ತು! ಹತ್ತು ದಿನಗಳಿಂದ. ಕಾರ್ಮಿಕ ಸಂಘದವರು ಸಂಧಿಗೆ ಕಾತರರಾಗಿದ್ದರು. ಮ್ಯಾನೇಜರರು ಹೇಳಿದರು :

"ನಮಗೆ ಒಂದೂಕಾಲು ಲಕ್ಷ ರೂ. ನಷ್ಟವಾಗಿದೆ."

ಕಾರ್ಮಿಕ ಸಂಘದವರು ಹೇಳುತ್ತಿದ್ದರು: "ಮಿಲಿಟರಿಯವರಿಗೆ ೧೫೦ ಲಕ್ಷ ಹಂಚು ನಷ್ಟವಾಯಿತು. ದ್ರೋಹವಿದು ದ್ರೋಹ!"

"ದ್ರೋಹ?"-ಎಂದು ರಾಯರು ಹುಬ್ಬುಗಂಟಿಕ್ಕಿ ಕೇಳಿದರು.

ರಾಯರಿಗೆ ದುಃಖವಾಯಿತು....ಇಂತಹ ಘಟನೆಗಳು ಆಗುತ್ತಲೇ ಇರಬೇಕೆ? ತಮಗೆ ಶಾಂತಿ ಬೇಡವೆ?

ಅಂತೂ ಮುಷ್ಕರ ನಿಂತಿತು. ಬೋನಸನ್ನುಳಿದು ಇತರ ಕೇಳಿಕೆಗೆ ರಾಯರೊಪ್ಪಿದರು.

ವಿದ್ಯುದ್ದೀಪಗಳು ಬೆಳಗಿದುವು. ಆದರೆ ಜೀವನದ ಮಣಿದೀಪಗಳು ಮನೆಯಲ್ಲಿರಲಿಲ್ಲ. ಫೋನಿನಲ್ಲಿ ಮ್ಯಾನೇಜರರು ಮಾತನಾಡುತ್ತಿದ್ದರು. ಕ್ಲಬ್ಬಿನಿಂದ ಗೆಳೆಯರು "ಪಿಂಗ್-ಪೊಂಗ್ ಆಡೋಣ ಬನ್ನಿ–ಒಂದಿಷ್ಟು ಇಸ್ಪೀಟು" ಎನ್ನುತ್ತಿದ್ದರು.

ಸುದ್ದಿ ಇಲ್ಲದೆ ತಿಳಿಸದೆ ನಿರಮಲಾ ಅನ್ನಾಮಲೆಯಿಂದ ಪರೀಕ್ಷೆಗೆ ಮುಂಚಿತವೆ ಬಂದಳು. 'ಏನಮ್ಮ ಹೀಗೇಕೆ?' ಎಂದರೆ ಉತ್ತರವಿಲ್ಲ, ಮಾತಿಲ್ಲ, ನಗುವಿಲ್ಲ. 'ದೆವ್ವ ಬಡಿದವಳಂತೆ' ಆಕೆ ಕುಳಿತಿದ್ದಳು.

"ಕಂದ ನಿರೂಪಿಗೇನಾಯಿತಪ್ಪ ದೇವರೇ—" ಎಂದುಕೊಂಡರು ರಾಯರು. ಎರಡು ದಿನ, ಮೂರು ದಿನ. "ಡಾಕ್ಟರರನ್ನು ಕರೆಯ ಬೇಕೆ?" ಎಂದರೂ ಆಕೆ ಪಿಟ್ಟೆನ್ನಲಿಲ್ಲ.

ಕಮಲೆ-ಅವಿವಾಹಿತೆ ಕಮಲೆ-ಮುಂಬಯಿಯಿಂದ ಬಂದಳು, ಉದ್ಯೋಗ ಬಿಟ್ಟು. ನಿರಮಲೆಯನ್ನು ಕರದೊಯ್ದಳು.

"ಮಕ್ಕಳೆ, ಇಷ್ಟನ್ನು ಮಾಡಿದೆ....ನಿಮಗಿಬ್ಬರಿಗಿನ್ನು ವಿವಾಹವಾದರಾಯಿತು" ಎಂದರು ಗಣೇಶರಾಯರು. ಆದರೆ ಮಕ್ಕಳ ಉತ್ತರವಿರಲಿಲ್ಲ.

........ಐಶ್ವರ್ಯ ಏನನ್ನೂ ತರಲಿಲ್ಲ ರಾಯರಿಗೆ. ಮತ್ತಷ್ಟು ದುಃಖಕ್ಕೆ, ವಿಚಾರದ ಹೊರೆಗೆ ಕಾರಣವಾಗಿತ್ತು.

ಗ್ರೀಸಿನಲ್ಲಿ ಸಾಮ್ಯವಾದಿ ಪಕ್ಷೀಯರ-ಜನಸಮುದಾಯದ ಬಂಡಾಯವೆದ್ದಿತ್ತು....ಕ್ಲಬ್ಬಿನಲ್ಲಿ ಆ ರುದ್ರನಾಟಕದ ವಾರ್ತೆ ಓದಿ ರಾಯರು ಬ್ರಿಟಿಷರ ಸಾಮ್ರಾಜ್ಯ ನೀತಿಯನ್ನು ಕಟುವಾಗಿ ಟೀಕಿಸುತ್ತ ಮನೆಗೆ ಸಾಗಿದರು.

ಮರುದಿನ ಕಾರ್ಮಿಕರ ಮೆರವಣಿಗೆ ಇತ್ತು. "ಪುನಃ ಎಲ್ಲರೂ ಕೂಡಿ ತುಟ್ಟಿಭತ್ತೆ ಕೇಳುತ್ತಿದ್ದಾರೆಯೆ?" ಎಂದು ರಾಯರು ನೋಡಿದರು. ಅಲ್ಲ! ಗ್ರೀಸಿನ ದಲಿತ ಜನರೊಡನೆ ಸಹಾನುಭೂತಿ ತೋರಿಸುವುದಕ್ಕೆ-ಬ್ರಿಟಿಷರ, ಗ್ರೀಸಿನ ಭಂಡವಳಗಾರರ ವಿರುದ್ಧ ರೋಷ ಪ್ರದರ್ಶಿಸುವುದಕ್ಕೆ!

ಭಂಡವಳಗಾರರು? "ನಮ್ಮ ದೇಶದಲ್ಲಿ ನಾವು ಭಂಡವಳಗಾರರು-ಗ್ರೀಸಿನಲ್ಲೂ ಭಂಡವಳಗಾರರು!"........

....ರಾಯರ ಆರೋಗ್ಯ ಕೆಟ್ಟಿತು.

ಮ್ಯಾನೇಜರರೊಂದು ದಿನ ಬಂದು ಕೇಳಿದರು: "ಕಟ್ಟಿಗೆಯ ಬೆಲೆ ನಿಯಂತ್ರಿಸುತ್ತಾರೆ. ಮಾರಾಟವೂ ನಿಲ್ಲುತ್ತದೆ. ಸರಕಾರದ ಸಹಾಯದಿಂದ ಸಿಕ್ಕೀತು. ಆದರೆ ಬೇಕಷ್ಟು ಸಿಗಲಿಕ್ಕಿಲ್ಲ. ಹತ್ತು ಸಾವಿರ ಟನ್ ದಾಸ್ತಾನು ಮಾಡಿಸೋಣವೆ?"

ಅಯ್ಯನ್ಯೆ !

"ಏನುಬೇಕೋ ಮಾಡು" ಎಂದರು.

ಊರಲ್ಲಿ ಸೌದೆಯ ಅಭಾವ, ಕೂಲಿಗಳು ಮಿಾನನ್ನು ಸುಡಲಿಲ್ಲ; ಹಲವು ಗುಡಿಸಲುಗಳಲ್ಲಿ ಹೊಗೆ ಹೊರಡಲಿಲ್ಲ. ಫ್ಯಾಕ್ಟರಿಗಳು ಮಾತ್ರ 'ಕೂ' ಎಂದುವು. ಚಿಮಿಣಿಗಳು ಹೊಗೆಯನ್ನೂ-ಉಗಿಯನ್ನೂ ಹೊರ ಹಾಕಿದುವು.

........ಮಧ್ಯ ರಾತ್ರಿಗೆ ಫೋನ್ ಬಂತು. ಚೀಫ್ ಮ್ಯಾನೇಜರರ ಬಂಧನ. ಮತ್ತೆ ರಾಯರ ಮೇಲೆ ಜಾಮಿಾನಿಲ್ಲದ ವಾರಂಟು! ಕಟ್ಟಿಗೆ ದಾಸ್ತಾನು ಮಾಡಿದ ಆರೋಪ.

ರಾತ್ರಿ ನಿದ್ದೆ ಹತ್ತಲಿಲ್ಲ ಅವರಿಗೆ....ಬೆಳಿಗ್ಗೆ ಬೇಗನೆದ್ದು ಬೆಳಕು ಉರಿಸಿ ಗೀತೆಯನ್ನು ಕೈಗೆತ್ತಿಕೊಂಡರು. ಹನ್ನೊಂದನೆಯ ಅಧ್ಯಾಯುವನ್ನು ಬಿಡಿಸಿದರು. ಕಾಲುತಾಸೂ ತಲ್ಲೀನರಾಗಿರಲಿಲ್ಲ. ಮನಸ್ಸಿನಲ್ಲಿ ನೂರು ವಿಚಾರಗಳು ಮೊರೆಯುತ್ತಿದ್ದುವು.

ತಮ್ಮಂಥ ವ್ಯಕ್ತಿಗೆ ಯಾವ ರೀತಿಯ ಕೊನೆ! ಎಂದಾದರೂ ಜೀವನದಲ್ಲಿ ತಮಗೆ ತೃಪ್ತಿ ದೊರಕಿದುದಿದೆಯ? ಶಾಂತಿ-ಎಲ್ಲಿ? ಯಾವು ದಕ್ಕಾಗಿ ಈ ತ್ಯಾಗ?

ತಾವೊಬ್ಬರು ಹುತಾತ್ಮ ಎಂದುಕೊಂಡರು.

ಉಷಃಕಾಲಕ್ಕೆ ಆರಂಭ.

ಆದರೆ ಇರುಳ ಛಾಯೆ ಅವರ ಜೀವನವನ್ನು ಕವಿಯತೊಡಗಿತ್ತು.

ಸೌಜನ್ಯ, ಸೌಶೀಲ್ಯ, ಆಸ್ತಿಕ್ಯ, ವಿನಯ-ಯಾವುದೂ ಆ ಛಾಯೆ ಯನ್ನು ಓಡಿಸಿರಲಿಲ್ಲ!



ಡಿಸೆಂಬರ್, ೧೯೪೪



# ಅಂಧಕಾರದಲ್ಲಿ

"ಇನ್ನೇನು ? ಒಂದೆರಡು ದಿನಗಳಲ್ಲಿ ಬ್ಲ್ಯಾಕ್ ಔಟಿಗೆ ಆರಂಭವಾಗುವುದು" ಎಂದ ಚಂದರ್. ಅವನು ರಂಗೂನಿನ 'ಪಬ್ಲಿಕ್ ವರ್ಕ್ಸ್' ಖಾತೆ ಕಚೇರಿಯ ಕೆಳ ದರ್ಜೆಯ ಒಬ್ಬ ಗುಮಾಸ್ತೆ. ಬಳಿಯಲ್ಲಿ ಕುಳಿತಿದ್ದ ಸುಹಾಸ ನಕ್ಕು ನುಡಿದ: "ಮಹಾರಾಯನಿಗೆ ತೊಂದರೆಯಾಗುವುದೇನು ಅದರಿಂದ ?"

ರತನ ಅಣ್ಣನ ಬೆಂಬಲಕ್ಕೆ ಬಂದಳು. ಪಿಯಾನೋ ಬಳಿಯಿಂದ ಎದ್ದು ಬರುತ್ತ, "ಮಹಾರಾಯನಿಗೊಬ್ಬನಿಗೇ ಏನು ? ನಮ್ಮಂತಹ ಜಪಾನೀ ಪಕ್ಷಪಾತಿಗಳೆಲ್ಲರಿಗೂ ಕಷ್ಟವೆ !" ಎಂದು ಸುಹಾಸನನ್ನು ನೋಡುತ್ತ, ಅಣಕವಾಡಿದಳು.

○ ○ ○ ○ ○ ○

ಅವರು ಮೂವರೂ ತುಂಬು ಜವ್ವನದವರು. ಸುಹಾಸ ಅದೇ ದಿನ ಮದರಾಸಿನಿಂದ ಬಂದು ತಲಪಿದ್ದ. ಚಂದರ್ ಅವನ ಬಾಲ್ಯದ ಸಹಪಾಠಿ. ಮಕ್ಕಳೊಡನೆ ಅವರನ್ನು ಹಡೆದಾಕೆ ಮೃತಳಾದ ಬಳಿಕ, ಚಂದರನ ತಂದೆ-ಒಬ್ಬ ಸಾಹಿತಿ-ರಂಗೂನಿಗೆ ಬಂದು ನೆಲೆಸಿದ್ದರು.

ಸುಹಾಸ ರಂಗೂನಿಗೆ ಬಂದಾಗ ಯುದ್ಧದ ಕಾರ್ಮೋಡಗಳು ಬಲು ದಟ್ಟವಾಗಿ ಬರ್ಮದ ಮೇಲೆ ಪಸರಿಸಿದ್ದುವು. ಕ್ಷಣ ಕ್ಷಣಕ್ಕೂ ರಂಗೂನಿನ ಜನರು ಜಪಾನರ ವಿಮಾನ ಧಾಳಿಯನ್ನು ಇದಿರು ನೋಡುತ್ತಿದ್ದರು. ಅಂತಹ ಸಮಯದಲ್ಲಿ ಸುಹಾಸನ ಆಗಮನವನ್ನು ಕಂಡು ಚಂದರನಿಗೆ ಆಶ್ಚರ್ಯವಾಯಿತು. "ಏನಯ್ಯ ಇದು ? ಜನರೆಲ್ಲ ಊರು ಬಿಡುತ್ತಿರು

ವಾಗ, ನೀನೊಬ್ಬ ಇಲ್ಲಿಗೆ ಹೊಸದಾಗಿ ಬಂದೆ?" ಎಂದೆಲ್ಲ ಪ್ರಶ್ನೆಗಳ ಮಳೆ ಸುರಿಸಿದ.

ಮೊದಮೊದಲಿಗೆ ಸುಹಾಸ ಉತ್ತರವೀಯಲಿಲ್ಲ. ಕೊನೆಗೆ ಎಲ್ಲವನ್ನೂ ಬಿಡಿಸಿ ಹೇಳಿದ. ಮದರಾಸಿನ ಅವರದೊಂದು ಯುವಕರ ಸಂಘ ತನ್ನ ಪ್ರತಿನಿಧಿಯಾಗಿ ಅವನನ್ನು ರಂಗೂನಿಗೆ ಕಳುಹಿದ್ದಿತು. ರಂಗೂನಿನ ರಕ್ಷಣಾ ವಿಧಾನಗಳನ್ನು ಅಭ್ಯಸಿಸುವುದಕ್ಕಾಗಿ, ಜನರು ಸುಸಂಘಟಿತರಾಗಿ ಯಾವ ಯಾವ ರೀತಿ ಜಪಾನರ ಮುನ್ನಡೆಯನ್ನು ನಿರೋಧಿಸಬಹುದೆಂಬುದನ್ನು ಕಲಿತುಕೊಳ್ಳುವುದಕ್ಕಾಗಿ. ರಂಗೂನಿನ ಸರಕಾರಿ ಗುಮಾಸ್ತೆ ಚಂದರನಿಗೆ ಅದೊಂದು ಆಶ್ಚರ್ಯದ ವಾರ್ತೆಯೇ!

"ಓ!" ಎಂದ ಅವನು. "ಹಾಗಿದ್ದರೆ ನೀನೊಬ್ಬ ಜಪಾನೀ ವಿರೋಧಿ?"

ಹೌದು; ಅವನೊಬ್ಬ ಜಪಾನೀ ವಿರೋಧಿ, ಫಾಸಿಸ್ಟ್ ವಿರೋಧಿ·

o o o o o o

ಸುಹಾಸ, ಚಂದರನ ಮನೆಯಲ್ಲೇ ಉಳಕೊಂಡ. ಅವರೂ ಇಬ್ಬರೇ ಇದ್ದರು; ಅಣ್ಣ ತಂಗಿಯರು. ಅವರ ಸಾಹಿತಿ ತಂದೆಯನ್ನು, ಸಾಲದುದಕ್ಕೆ ಇಳಿವಯಸ್ಸಿನವರನ್ನು, ಸರಕಾರವು ಸೆರೆಮನೆಗೆ ಅಟ್ಟಿ ಐದು ತಿಂಗಳ ಅವಧಿಯಾಗುತ್ತ ಬಂದಿತ್ತು. ತಮ್ಮ ಕೆಲವು ಕತೆ ಕವಿತೆಗಳ ಮೂಲಕ ಜನರಲ್ಲಿ ರಾಷ್ಟ್ರೀಯ ಭಾವನೆಯನ್ನು ತುಂಬಲು ಯತ್ನಿಸಿದುದಕ್ಕಾಗಿಯೇ—ಆ ಅಕ್ಷಮ್ಯ ಅಪರಾಧಕ್ಕಾಗಿಯೇ—ಸರಕಾರ ತುರಂಗವಾಸದ ಉಡುಗೊರೆಯನ್ನು ಅವರಿಗೆ ಕೊಟ್ಟಿತ್ತು.

ಆರಾಮಾಸನದ ಮೇಲೆ ಒರಗುತ್ತ ಸುಹಾಸ, ಹಳೆಯ ಕೆಲವು ಪತ್ರಿಕೆಗಳನ್ನೆತ್ತಿಕೊಂಡು, ಚಂದರನ ತಂದೆಯ ಹಲವು ಇಂಗ್ಲಿಷ್ ಬರೆಹಗಳನ್ನೋದಿದ. ಉಜ್ವಲ ಕೃತಿಗಳು ಅವು. ಆ ಮುದುಕ ಯಾವುದನ್ನೂ ಸಂಕುಚಿತ ದೃಷ್ಟಿಯಿಂದ ಕಾಣದೆ, ತನ್ನ ಭಾವನೆಗಳನ್ನು, ಆ ಹಳೆಯ ಕಾಲದ ಹೃದಯದಲ್ಲಿ ಹುದುಗಿದ್ದ ಹಿರಿಯ ಆಸೆಗಳನ್ನು, ಶಕ್ತಿಪೂರ್ಣ

ಶೈಲಿಯಲ್ಲಿ ಹೊರಗೆಡವಿದ್ದ. ಅಂಥವನು ಕಾರಾಗೃಹದಲ್ಲಿ ಕೊಳೆಯು ಬೇಕಾಗಿದ್ದಿತು.

ಆ ಹೊತ್ತಿಗೆ ಅವರು ಹೊರಗಿದ್ದಿದ್ದರೆ? ಸುಹಾಸ ಯೋಚಿಸಿದ. ತಮ್ಮ ಲೆಕ್ಕಣಿಕೆಯನ್ನೆ ಆಯುಧವಾಗಿ ಹಿಡಿದು ರಣಕಣಕ್ಕೆ ಅವರು ಇಳಿಯುತ್ತಿದ್ದರಲ್ಲ? ತಮ್ಮ ವಿಚಾರಪೂರ್ಣ ಲೇಖನಗಳ ಮೂಲಕ ಜನರನ್ನು ತಿವಿದೆಬ್ಬಿಸಿ, ಜಾಗೃತರನ್ನಾಗಿ ಮಾಡುತ್ತಿದ್ದರಲ್ಲ?

ತಂದೆಯ ಬಂಧನದಿಂದ, ಉರಿದು ಬಿದ್ದಿದ್ದ ಚಂದರ್-ರತನರಿಬ್ಬರೂ ಜಪಾನರ ಪಕ್ಷಪಾತಿಗಳಂತೆ ಆ ದಿನ ಅವನೊಡನೆ ಮಾತನಾಡಿದ್ದರು. ಯಾರು ಬಂದರೇನು? ಆಳುವ ಸರಕಾರದ ನಾಶವಾಗಬೇಕು. ಅದು ಅವರಿಬ್ಬರ ಇಷ್ಟ.

....ರತನ ಮಹಡಿಯ ಮೇಲಿನ ಕೋಣೆಯೊಳಗೆ ಪ್ರವೇಶಿಸಿದಳು.

"ಕಾಫಿಗೆ ಕೆಳಗೆ ಬರುತ್ತೀರಾ Mr. Anti-Fascist?" ಎಂದಳು.

ಬಾಯಲ್ಲಿದ್ದ ಸಿಗರೇಟಿನ ಹೊಗೆಯನ್ನು ಹೊರಕ್ಕೆ ಬಿಡುತ್ತಾ ಉತ್ತರ ರೂಪವಾಗಿ ಸುಹಾಸ ಮುಗುಳುನಗೆ ನಕ್ಕ.

o o o o o o

ಭೀಕರ ಹತ್ಯಾಕಾಂಡಕ್ಕೆ ಆರಂಭವಾಯಿತು. ಮನುಷ್ಯರು ಕಾಡಿನ ಮೃಗಗಳಂತೆ ಪರಸ್ಪರ ಕಾದಾಡ-ಕಡಿದಾಡತೊಡಗಿದರು. ಜಪಾನರ ವಿಮಾನಗಳು ಗಂಟೆಗಟ್ಟಲೆ ರಂಗೂನು ನಗರದ ಮೇಲೆ ಬಾಂಬಿನ ಮಳೆ ಗರೆದುವು. ಅದೊಂದು ಭೀಕರ ಬಲಿ, ಅಮಾನುಷ ಅತ್ಯಾಚಾರ. ಮನೆ ಮಠಗಳು ಮುರಿದುಬಿದ್ದುವು. ಸೌಧ, ಪ್ರಾಕಾರಗಳು ನಶಿಸಿಹೋದುವು. ಅಗ್ನಿ ಹಲವೆಡೆಗಳಲ್ಲಿ ತಾಂಡವವಾಡಿತು. ಸಾವಿರಾರು ಮಂದಿ ಜೀವಂತ ಸುಡಲ್ಪಟ್ಟರು; ನಿರಾಶ್ರಿತರಾದ ಅನಾಥ ಜನ ಬೀದಿ ಬೀದಿಗಳಲ್ಲೆ ವೈರಿ ವೈಮಾನಿಕರ ವಿಧ್ವಂಸಕ ಯಂತ್ರಗಳಿಗೆ ಬಲಿಯಾದರು.

ಅಯ್ಯನ್ಯೆ !

ಅಂದಿನ ಆಕಾಶ ಆಕ್ರಮಣ ಕೊನೆಗಂಡಿತು.

ಚಂದರ್-ರತನರು ನೆಲಸಮವಾಗಿದ್ದ ತಮ್ಮ ಮನೆಯ ಹೊರಗಡೆ ನಿಂತಿದ್ದರು. ಸುಹಾಸ ಅಲ್ಲೇ-ಬಳಿಯಲ್ಲೆ-ಓಡಾಡುತ್ತಿದ್ದ. ರತನಳಿಗೆ ಅದೊಂದು ಹೊಸ ಅನುಭವ. ಕಣ್ಣೀರು ಸುರಿಸುವುದಲ್ಲದೆ ಬೇರೇನನ್ನು ಆಕೆ ಮಾಡಬಲ್ಲಳು? ಚಂದರ್ ಅರೆ ಹುಚ್ಚನಂತೆ ಆಗಿದ್ದ.

ರತನ ಸುಹಾಸನನ್ನು ಕೂಗಿದಳು. ಅವನು ಬಳಿ ಸಾರಿದ. ಚಂದರ್ ಕೇಳಿದ: "ಈಗೇನು ಮಾಡಬೇಕಂತೀಯಾ?"

"ನಿನ್ನ ಸರಕಾರ ನಿರಾಶ್ರಿತರು ವಾಸಿಸುವುದಕ್ಕೆ ತಕ್ಕ ವ್ಯವಸ್ಥೆ ಕೂಡ ಮಾಡಿಲ್ಲ ತಾನೆ?" ಎನ್ನುತ್ತಾ ಸುಹಾಸ, ರೋದಿಸುತ್ತ ಬೀದಿಯಲ್ಲಿ ಗುಂಪು ಕೂಡಿದ್ದ ಜನರೆಡೆಗೆ ಬೊಟ್ಟು ಮಾಡಿದ. ಅಲ್ಲಿಯೂ ಹಲವು ಮಂದಿಯಿದ್ದರು ಅನಾಥರು.

"ನಾವೂ ಅವರೊಡನೆ ಇರೋಣ," ಎಂದ ಚಂದರ್.

ಸುಹಾಸ ದನಿಗೂಡಿಸಿದ: "ಗೆಳೆಯರ ಮನೆ ಯಾರದಾದರೂ ನಾಶವಾಗದೆ ಇದ್ದರೆ ಅಲ್ಲಿಗೆ ಹೋಗಬಹುದು."

o o o o o o

ಬರ್ಮಾ ಸರಕಾರದ ಆಜ್ಞೆಯಾಗಿತ್ತು. ಚಿಕ್ಕ ಪುಟ್ಟ ಅಧಿಕಾರಿಗಳೆಲ್ಲ ರಂಗೂನು ಬಿಟ್ಟು ಹೊರಟುಹೋಗಬಹುದು; ಹೆಂಡತಿ ಮಕ್ಕಳನ್ನೆಲ್ಲ ಸುರಕ್ಷಿತ ಸ್ಥಳಕ್ಕೆ ಸಾಗಿಸಬೇಕು; ಜನರೂ ನಗರತ್ಯಾಗ ಮಾಡಬೇಕು.

ಚಂದರ್‌ನ ಸಹೋದ್ಯೋಗಿಯ ಮನೆಯಲ್ಲಿ ಅವರು ಮೂವರೂ ತಂಗಿದ್ದರು. ಸುಹಾಸ ಕಲಿಯುವುದಕ್ಕೆ ಬಂದಿದ್ದ. ಬಹಳ ಕಠಿನ ಪಾಠಗಳನ್ನು ಅವನು ಕಲಿಯುವುದಕ್ಕಿತ್ತು. ರಾತ್ರಿ ಕತ್ತಲಲ್ಲಿ, ಹಾಸಿಗೆಯ ಮೇಲೆ ಬಿದ್ದುಕೊಳ್ಳುತ್ತಾ ಅವರು ಮೂವರೂ ಮಾತನಾಡಿದರು. ಕೆಲವು ವ್ಯಾಪಾರೀ ನೌಕೆಗಳು ಸದ್ಯದಲ್ಲೇ ಭಾರತಕ್ಕೆ ರಕ್ಷಾರ್ಥಿಗಳೊಡನೆ ತೆರಳು

ವುವು. ಅದರಲ್ಲೊಂದರಲ್ಲಿ ರತನಳೊಡನೆ ಸುಹಾಸ ಮುದರಾಸಿಗೆ ಹೋಗ ಬೇಕು. ಚಂದರ್ ರಂಗೂನಿನಲ್ಲೇ ಉಳಿಯುವವ. ತಂದೆಯ ಬಂಧ ವಿಮೋಚನೆಯಾಗುವ ಸಂಭವವಿದ್ದರೆ, ಅವರನ್ನು ಹೇಗೆ ಬಿಟ್ಟು ಹೋಗ ಬೇಕು?

ರತನ ಮಲಗಿದ್ದಲ್ಲಿಂದ ಹಾರಿ ಕುಳಿತಳು. ಇಲ್ಲ; ಯಾರೂ ಹೋಗಕೂಡದು. ತಾನಂತೂ ಹೋಗಲಾರಳು. ಸುಹಾಸ-ಪಾಪ !- ಕೆಟ್ಟ ಸಮಯದಲ್ಲಿ ರಂಗೂನಿಗೆ ಬಂದ. ಮನೆಯಲ್ಲಿ ಎಷ್ಟು ಕಳವಳ ಪಡುತ್ತಿರುವರೋ ಏನೋ! ಅವನು—ಅವನು ಹಿಂತೆರಳಬೇಕು.

"ಇಲ್ಲ! ಆಗುವುದಿಲ್ಲ...." ಸುಹಾಸನೆಂದ. "ನಾನು ನಿಮ್ಮ ಜತೆಯಲ್ಲೇ ಇರುವೆ." ಅವನ ನಿರ್ಧಾರಕ್ಕೆ ಪ್ರತಿ ನುಡಿಯುವುದರಿಂದ ಏನೂ ಫಲವಿಲ್ಲವೆಂಬುದು ಅಣ್ಣ ತಂಗಿಯರಿಬ್ಬರಿಗೂ ಗೊತ್ತು.

ಕೊಂಚ ಹೊತ್ತು ನೀರವತೆಯಲ್ಲಿ ಕಳೆಯಿತು.

ಮಧ್ಯೆ ರತನ ಕೇಳಿದಳು: "ತಂದೆಯನ್ನು ಬಿಡುವ ಸಂಭವ ವಿದೆಯೇ?"

ಚಂದರ್ ಹಲ್ಲು ಕಡಿದ. "ಯಾರಿಗೆ ಗೊತ್ತು? ಜಪಾನರು ಬೇಗನೆ ಬಂದರೆ ಇದೆ...." ಎಂದ.

"ಜಪಾನರು ಬಂದು ನಿಮ್ಮ ತಂದೆಯನ್ನೂ ಬರ್ಮವನ್ನೂ ಪಾರ ತಂತ್ರ್ಯದಿಂದ ಬಿಡುಗಡೆ ಮಾಡುವರೆಂದು ನಿಮ್ಮ ನಂಬಿಕೆಯೆ?" ಸುಹಾಸನ ಧ್ವನಿ ಅದು. ಬಹು ವ್ಯಥಿತನಾಗಿ ಹಾಗೆ ನುಡಿದಿದ್ದ. ಅವನು ಮೆಲ್ಲನೆದ್ದು, ಗೋಡೆಗೆ ಅಡ್ಡವಾಗಿ ಕುಳಿತು, ಒಂದು ಸಿಗರೇಟು ಹಚ್ಚಿದ.

ಚಂದರ್ ಗೊಗ್ಗರ ಸ್ವರದಲ್ಲಿ ಹೇಳುತ್ತ ನಡೆದ:

"ಇರಬಹುದು ಮಿಸ್ಟರ್....ನಿನ್ನ ತತ್ವಗಳೆಲ್ಲ ಸರಿಯಿರಬಹುದು. ಕ್ಷಮಿಸಿಬಿಡು. ನಮಗೂ ಕೆಲವು ಅಭಿಪ್ರಾಯಗಳಿವೆ. ಅವು ಸುಳ್ಳೆಂದು ಯಾರು ಹೇಳಿದರೂ ನಾವು ಒಪ್ಪಲಾರೆವು. ನಮ್ಮನ್ನು ಕ್ಷಮಿಸು."

ಅಯ್ಯನ್ನೈ !

" ನಮ್ಮನ್ನು ಎಂದರೆ, ಅದರಲ್ಲಿ ನಾನು ಕೂಡ ಸೇರಿಕೊಂಡೆನೇ " ? ಎಂದು ರತನ ಕುಲುಕುಲು ನಗುತ್ತ ಕೇಳಿದಳು.

o o o o o o

ಮರುದಿನ ಮಧ್ಯಾಹ್ನ ಅವರೆಲ್ಲ ತುರಂಗದ ಕಡೆಗೆ ನಡೆದ. ಸರಕಾರವು ಕೈದಿಗಳನ್ನೆಲ್ಲ ಬಿಡತೊಡಗಿತ್ತು. ಆಸ್ಪತ್ರೆಗಳನ್ನು ಬರಿ. ಮಾಡುತ್ತಿತ್ತು. ಮೃಗಾಲಯಗಳನ್ನು ಮುಚ್ಚುತ್ತಿತ್ತು.

ಚಂದರ್ ಉತ್ಸಾಹದಿಂದ ಉನ್ಮತ್ತನಂತೆ ವರ್ತಿಸಿದ. [illegible] ಆತುರ ದಿಂದ, ಆನಂದದಿಂದ ಅಳತೊಡಗಿದ್ದಳು. ಸುಹಾಸ ಮೆಲ್ಲಮೆಲ್ಲನೆ ಹೆಜ್ಜೆ ಯಿಕ್ಕುತ್ತ ಹೊರಬರುತ್ತಿದ್ದ ಅವರ ತಂದೆಯನ್ನು–ಒಂದು ಕೃಶ ಶರೀರ ವನ್ನು–ಎವೆಯಿಕ್ಕದೆ ನೋಡುತ್ತ ನಿಂತ. ತನ್ನ ಪ್ರೀತಿಯ ನಗರದ ದುರ ದೃಷ್ಟವನ್ನು ಕಂಡು ಆ ಮುದುಕ ಅವರ್ಣನೀಯ ಯಾತನೆಯನ್ನು ಮನೋ ವೇದನೆಯನ್ನು ಅನುಭವಿಸಿದರು. ವಯೋಭಾರ[illegible]ಂದ ಬಾ[illegible] ಬಳುಕುತ್ತಿದ್ದ ದೇಹ; ಜೈಲು ಜೀವನದಿಂದ ಶಕ್ತಿಗುಂದಿದ್ದ ಶರೀರ; ಅವರು ಕಂಬನಿ ಮಿಡಿಯುತ್ತ–ಕಂಪಿಸುತ್ತ ನಡೆದರು.

ಮಾರ್ಟಬಾನ್ ಜಪಾನರ ಕೈವಶವಾಯಿತೆಂಬ ವಾರ್ತೆ ಬಂತು ಆ ಸಂಜೆ. ರಾತ್ರೆ–ಪುನಃ ಕತ್ತಲಲ್ಲಿ ಕುಳಿತಿದ್ದ–ಅವರಪ್ಪ ದುಃಖೋದ್ಗಾರ ವೆತ್ತುತ್ತ ಆ ವಾರ್ತೆಯನ್ನು ಕೇಳಿದರು. ಅವರು ನಡು ನಡುಗುತ್ತ ಹೇಳಿ ದರು : " ನಮ್ಮ ನಾಡನ್ನು ರಕ್ಷಿಸುವವರಿಲ್ಲದೆ ಹೋಯಿತು....ಪವಿತ್ರ ಭೂಮಿಗೆ ಪರಕೀಯರ ಪದಾರ್ಪಣವಾಯಿತು....ಬರ್ಮದ ಸ್ವಾತಂತ್ರ್ಯದ ಆಸೆ ದೂರ ಉಳಿಯಿತು...."

ಸುಹಾಸ ಸಿಗರೇಟು ಹಚ್ಚುತ್ತ ಹೇಳಿದ : " ಯು ಸಾ ರನ್ನು ಬ್ರಿಟ ನ್ನಿನಲ್ಲೆ ಬಂಧಿಸಿದ್ದಾರೆ.... "

ಮುದುಕ ಅವನತಶಿರರಾಗಿ ಯೋಚಿಸಿದಂತೆ ಕಂಡಿತು.

" ಮಾಡಿದ್ದುಣ್ಣುತ್ತಾರೆ ಪಾಪಿಗಳು .... " ಎಂದು ಚಂದರ್ ತೀಕ್ಷ್ಣವಾಗಿ ನುಡಿದ.

“ಚಂದರ್!” ಎಂದರು ಅವರ ತಂದೆ, “ಏನು ಹೇಳುತ್ತಾ ಇದ್ದೀಯಪ್ಪಾ?....ಛೆ!....ನಾನು ಖಂಡಿತ ಹೇಳುತ್ತೇನೆ....ಮುದುಕನ ಮನಸ್ಸಾಕ್ಷಿ ನುಡಿಯುತ್ತಾ ಇದೆ....ಜೈಲಲ್ಲೆಲ್ಲೂ ಪತ್ರಿಕೆ ಓದುತ್ತಿರಲಿಲ್ಲ ...ನು....ಆದರೂ ಇಷ್ಟು ಹೇಳುತ್ತೇನೆ. ಜಪಾನರಿಂದ ಈ ದೇಶಕ್ಕೆ ...ತಾಗುವುದಿಲ್ಲ....”

ರ...ಪ ಆಸಕ್ತಿಯಿಂದ ಕಿವಿಗೊಡುತ್ತಿದ್ದುದನ್ನು ಸಿಗರೇಟಿನ ನಸು ಬೆಳಕಿನ...ಹಾಸ ಕಂಡ.

ಂ ಂ ಂ ಂ ಂ ಂ

ಎರಡನೆಯ ಬಾರಿ ಆಕಾಶಾಕ್ರಮಣವಾಯಿತು. ನಗರದಲ್ಲಿ ಕ್ಷೋಭೆ ...ದ್ದಿತು....ಯಾವುದೂ ವ್ಯವಸ್ಥಿತ ರೀತಿಯಲ್ಲಿರಲಿಲ್ಲ.

ಹಡಗುಗಳಲ್ಲಿ ಬಂಗಾಳಾಖಾತವನ್ನು ದಾಟುವುದು ಕೈಲಾಗದ ...ಯಿತು. ಚಂದರ್, ಸುಹಾಸನೊಡನೆ ತಂಗಿಯನ್ನೂ ತಂದೆಯನ್ನೂ ಕರೆದುಕೊಂಡು ಉತ್ತರಕ್ಕೆ ಪಯಣ ಬೆಳೆಸಿದ. ರೈಲ್ವೆಯಲ್ಲಿ ಪಯಣ; ದೋಣಿಗಳಲ್ಲಿ ಪಯಣ; ಕಾಲುನಡಗೆಯ ಪಯಣ. ಪೆಗುವಿನಲ್ಲಿ ಅವರು ಉಳಕೊಂಡರು.

ಗಾನ-ನೃತ್ಯಗಳೇ ರತನಳ ಜೀವನದುಸಿರು. ಪಿಯಾನೋ ಅವ ಳನ್ನು ಅಗಲಿತ್ತು....ಆಕೆ ವಿರಹಿಣಿಯಾಗಿದ್ದಳು; ದುಃಖಿನಿಯಾಗಿದ್ದಳು. ಚಂದರ್ ಪೇಟೆಗೆ ಹೋಗಿದ್ದಾಗ, ತಂದೆ ಪಕ್ಕದೊಂದು ಕೋಣೆಯಲ್ಲಿ ವಿರ ...ಸುತ್ತಿದ್ದಾಗ, ರತನ ಇಳಿದನಿಯಲ್ಲಿ ಹಾಡತೊಡಗಿದಳು....

ಕೊಂಚ ತಡೆದು, ಸುಹಾಸ ಬಾಗಿಲ ಹೊರಗೆ ನಿಂತು, “ನನಗೂ ...” ಎಂದ. ರತನ ಎದ್ದು ಹೋಗಿ ಬಾಗಿಲು ತೆರೆದಳು. ರಂಗೂನಿನ ಮುತ್ತಿಗೆಯಲ್ಲಿ ಜಪಾನರು ವಿಜಯಿಗಳಾಗುತ್ತಿದ್ದಾರೆ....” ...ನ್ನುತ್ತಾ ಸುಹಾಸ ಒಳಪ್ರವೇಶಿಸಿದ.

ರತನ ಹಾಸ್ಯಕ್ಕೆಂದು, “ಫಾಸಿಸ್ಟ್ ಸೇನೆಗಳ ವಿಜಯ!” ಎಂದಳು.

ಅಯ್ಯನ್ನೆ !

ಸುಹಾಸ ನಕ್ಕ. " ಒಬ್ಬಳಿಗೇ ಬೇಸರವಾಗುತ್ತಿದೆಯೇನು ? " ಎಂದು ಕೇಳಿದ.

ರತನ ತಲೆಯಲುಗಿಸಿದಳು.

" ನನ್ನ ಪೆಟ್ಟಿಗೆಯಲ್ಲಿ ಕೆಲವು ಪುಸ್ತಕಗಳಿವೆ. ಆದರೆ ಅವು ಹೆಚ್ಚಾಗಿ 'ಇಸಂ' ಗಳಿಗೆ ಸಂಬಂಧಿಸಿದುವು...."

" ಇರಲಿ....ಅಗತ್ಯ ಓದುವೆ "

o o o o o o

ಟೌಂಗೂವಿಗೆ ಅಭಿಮುಖವಾಗಿ ಅವರ ಪಯಣ ಬೆಳೆಯಿತು.

ಆ ದಿನ ನಡುರಾತ್ರೆ, ಎಲ್ಲೋ ಮಲಗಿದ್ದಾಗ ಚಂದರನ ತಂದೆ " ಚಂದರ್ !....ರತನ್ ! " ಎಂದು ಒಂದೆರಡು ಬಾರಿ ಕೂಗಿದರು. ತಮ್ಮ ಆತ್ಮೀಯನಂತೆಯೇ ಆಗಿದ್ದ ಸುಹಾಸನನ್ನು ಕರೆದರು.

ಸುಹಾಸ ಫಕ್ಕನೆದ್ದು ಬೆಳಕು ಉರಿಸಿದ. ಚಂದರ್ ರತನರು ಗಡಬಡಿಸಿದರು.

ಮುದುಕನಿಗೆ ಪ್ರಾಣೋತ್ಕ್ರಮಣವಾಗುತ್ತಿತ್ತು.

ಅವರು ತೀರಿಕೊಂಡರು. ಅಸಹ್ಯ ಜೈಲು ಜೀವನದ ಅನಂತರ ಉಸಿರು ಹಿಡಿದುಕೊಳ್ಳುವ ಚೇತನವೂ ಆ ಜೀವದಲ್ಲಿರಲಿಲ್ಲ.

o o o o o o

ಯಥಾಪ್ರಕಾರದ ರೋದನ-ರಂಪಾಟಗಳಾದುವು. ಶವ ಸಂಸ್ಕಾರವಾಯಿತು....

ಆ ರಾತ್ರೆ ಕತ್ತಲಲ್ಲಿ ಅವರು ಕುಳಿತುಕೊಂಡಿದ್ದರು. ಸುಹಾಸ ಎದ್ದು ಹೊರಗೆ ಹೋಗಿ, ಕೊಂಚ ತಡೆದು ಬಂದ. ಚಂದರ್ ಒಂದು ಹಣತೆ ಹಚ್ಚಿದ.

ಸುಹಾಸ ಅತ್ತಿಂದಿತ್ತ ಶತಪಥ ತುಳಿದ....ಮಧ್ಯೆ ನಿಂತು ಒಮ್ಮೆ ನುಡಿದ, " ನಿಮ್ಮ ಪೂಜ್ಯಪಿತೃ ಹೊರಟುಹೋದರು." ಉದ್ವೇಗಪೂರ್ಣ ಸ್ವರದಲ್ಲಿ ಅವನು ಮುಂದುವರಿಸಿದ :

" ಅವರ ಆತ್ಮದ ಬಲಿದಾನವಾಯಿತು. ಸ್ವಾತಂತ್ರ್ಯಕ್ಕಾಗಿ ಅವರು ಹೋರಾಡಿದರು ; ಮಾನವನ ಹಕ್ಕುಗಳಿಗಾಗಿ ಅವರು ಕಾದಿದರು.... ಸತ್ಯಸಾಹಸವೇ ಅವರ ಜೀವನದ ಗುರಿಯಾಯಿತು. ಆದರೆ ಅವರ ಆಶಯು ಇನ್ನೂ ಅಪೂರ್ಣವಾಗಿದೆ....ಪಾಶವೀ ಶಕ್ತಿ ಲೋಕದಲ್ಲಿ ತಲೆಯೆತ್ತಿ ಮೆರೆಯುವುದನ್ನು ಅವರು ಕಂಡರು. ದಾರುಣ ವ್ಯಥೆಯನ್ನು, ಅಪಾರ ವೇದನೆಯನ್ನು, ಅವರು ಅನುಭವಿಸಿದರು...."

o o o o o o

ಬರ್ಮದಲ್ಲಿ ವೈರಿಸೇನೆಗಳು ಉತ್ತರಕ್ಕಭಿಮುಖವಾಗಿ ಸಾಗುತ್ತಿದ್ದುವು. ಚಂದರ್-ರತನ್-ಸುಹಾಸರೂ ಲಕ್ಷೋಪಲಕ್ಷ ಇತರ ರಕ್ಷಾರ್ಥಿಗಳೊಡನೆ ಸೇರಿ ಹೋಗಿ, ಉತ್ತರಕ್ಕೆ ನಡೆಯುತ್ತ ಹೋದರು.

ವಿವರಿಸಲಸಾಧ್ಯವಾದ ಸಂಕಷ್ಟಗಳು ಇವರಿಗೆ ಇದಿರೊಡ್ಡಿದುವು. ನೀರಿನ ಅಭಾವದಿಂದ, ಆಹಾರದ ಅಭಾವದಿಂದ ಮಡಿದವರ ಸಂಖ್ಯೆ ಅಲ್ಪವಲ್ಲ. ವಾತಾವರಣ ಈ ಅನಾಥರ ಗೋಳು, ಕರುಣಾಕ್ರಂದನಗಳಿಂದ ತುಂಬಿತು. ಸಾಂಕ್ರಾಮಿಕ ರೋಗಗಳು ಬೇರೆ ಹಬ್ಬಿಕೊಂಡುವು. ಶಾಖದ ಬಳಿ ಸಾರಿದ ಪತಂಗಗಳಂತೆ ಒಂದೊಂದೇ ಜೀವ ಉದುರ ತೊಡಗಿತು.

ಚಂದರ್ ಸಾಗಿದ ಹುಚ್ಚನಂತೆ, ಸುಹಾಸ ನಡೆದ ಕನಸು ಕಾಣುತ್ತ; ರತನ ಅವರನ್ನು ಹಿಂಬಾಲಿಸಿದಳು ಆಸೆಯಿಂದ. ನಿರಾಶೆಯಲ್ಲಿಯೂ ಆಸೆ ಅವಳಿಗೆ.

ಕೈಯಲ್ಲಿದ್ದ ಹಣ ಮುಗಿಯುತ್ತ ಬಂದಿತ್ತು. ಸಿಕ್ಕಿದ ಆಹಾರವನ್ನಷ್ಟು ಎಚ್ಚರಿಕೆಯಿದ ಅವರು ತಿನ್ನುತ್ತಿದ್ದರು.

o o o o o o

" ಏನು ಹೇಳುತ್ತೀ Anti-Fascist ಇದಕ್ಕೆ ? ಏನು ಹೇಳುತ್ತಿ ?" ಚಂದರ್ ರಕ್ಷಾರ್ಥಿಗಳ ಗುಡಾರದ ಬಳಿಗೆ ಬರುತ್ತ ಕೂಗಾಡಿದ.

ಅಯ್ಯುನ್ಸೆ !

"ಏನಯ್ಯಾ ಅದು ?" ಸುಹಾಸ ಹೊರಗೆ ಬಂದ.

"ಯಾರು ಇಲ್ಲಿ ಬಿಳಿಯರಿದ್ದಾರೆ, ಅವರಿಗೆ ಸೌಕರ್ಯವಿದೆ. ಶ್ವೇತ ಮಾರ್ಗ ; ಬೇಗನೆ ಭಾರತಕ್ಕೆ ಹೋಗಬಹುದು. ಉಳಿದವರೆಲ್ಲ ಕರಿಯರೊ ? —ಹಾಗಿದ್ದರೆ ಇಲ್ಲೇ ಸಾಯಿರಿ. ಸಾಧ್ಯವಿದ್ದರೆ ನಡೆಯಿರಿ ನೋಡೋಣ ! ಕೃಷ್ಣ ಮಾರ್ಗವಿದೆ."

ಸುಹಾಸ ಅವನ ಬಳಿ ಸಾರಿ ಭುಜ ಕುಲುಕಿದ, "ಚಂದರ್ !"

ಚಂದರ್ ಮುಖ ತಿರುಗಿಸಿ "ಏನು ಹೇಳುತ್ತಿ Anti-Fascist ಇದಕ್ಕೆ ?" ಎಂದು ಗರ್ಜಿಸಿದ.

ಸುಹಾಸ ಸ್ವರವೆತ್ತಿ ನುಡಿದ : "ಅನ್ಯಾಯಕ್ಕೆ ಇದಿರಾಡೋಣ. ಆದರೆ ಎಚ್ಚರವಿರಲಿ. ನಾವು ಅಂಧರಾಗಬಾರದು. ತೊರೆಯಿಂದ ಕೆಳಗೆ ಕೆರೆಗೆ ಬೀಳಬಾರದು."

೦ ೦ ೦ ೦ ೦ ೦

ಅವರು ಮಣಿಪುರವನ್ನು ತಲಪಿದರು, ಎರಡು ತಿಂಗಳುಗಳ ದೀರ್ಘಕಾಲದ ಬಳಿಕ.

ಚಂದರ್ ಕರೆದು ಹೇಳಿದ : "ಭಾರತಕ್ಕೆ ಬಂದಿದ್ದೇವೆ ; ನಾವು ಭಾರತಕ್ಕೆ ಬಂದಿದ್ದೇವೆ"

ಸುಹಾಸ ಉದ್ಗಾರವೆತ್ತಿದ : "ನಮ್ಮ ಜನರು ನಾಲ್ವತ್ತು ಕೋಟಿ ; ನಾಲ್ವತ್ತು ಕೋಟಿ !"

ರತನ ಪಿಸುಗುಟ್ಟುತ್ತಿದ್ದಳು : "ಮಣಿಪುರ ! ಮಣಿಪುರ !" ಅವಳು ಸುತ್ತು ಸುತ್ತು ತಿರುಗಿ ನೋಡಿದಳು. ನೆರೆದಿದ್ದ ದರಿದ್ರ-ಪಾಪಿ ರಕ್ಷಾರ್ಥಿಗಳ ತಂಡವೆಲ್ಲ ನರ್ತಿಸುತ್ತಿದ್ದಂತೆ ಆ ಹುಚ್ಚಿಗೆ ಭಾಸವಾಗಿರಬೇಕು.

ಸುಹಾಸ ಎಚ್ಚತ್ತವನಂತೆ ಚಂದರ್—ರತನರನ್ನು ನೋಡಿ, ಬಳಿ ಸಾರಿದ.

"ರತನ್ !" ಎಂದ.

ಅವಳು ಮೊಗವೆತ್ತಿ ಅವನನ್ನು ಭಾವಪರವಶಳಾಗಿ ನೋಡಿದಳು.

"ಇದು ಮಣಿಪುರ"

ಹೌದೆಂಬಂತೆ ಅವಳು ತಲೆಯಾಡಿಸಿದಳು.

"ಇಲ್ಲಿ ನೃತ್ಯವಿದೆ" ಸುಹಾಸ ಕೂಗಿದ. "ತಾಂಡವ"ನೃತ್ಯ-ಪ್ರಲಯ ನೃತ್ಯ-ಪಾಶವೀ ನೃತ್ಯ! ಈ ಕೋಟಿ ಕೋಟಿ ಭ್ರಾತೃ ಭಗಿನಿಯರ ಮೇಲೆಲ್ಲ ನಗ್ನ-ಭೀಕರ-ಫಾಸಿಸ್ಟ್ ನೃತ್ಯ !"

ಆ ಮಾತುಗಳು ಗುಡುಗಿನಂತೆ ಗುಡುಗಿದುವು. ರತನ ಅಣ್ಣನನ್ನು ಆತುಕೊಂಡು ನಿಂತಿದ್ದಳು.

ರೈಲು ವಿಶಾಖಪಟ್ಟವನ್ನು ದಾಟಿತು ; ಕೋಕನಾಡವನ್ನು ಹಿಂದಿಕ್ಕಿತು. ಸುಹಾಸ ಹೇಳಿದ : "ನಮ್ಮ ಹೆಮ್ಮೆಯ ನಗರಗಳು !"

ರೈಲಿನ ಯಂತ್ರ 'ಹೌದು, ಹೌದು, ಹೌದು' ಎನ್ನುತ್ತ ಸಾಗುತ್ತಿತ್ತು. ಚಂದರ್-ರತನರು ತಲೆದೂಗಿದರು.

ಆ ದಿನ ಸಂಜೆ ರತನ ಹಾಡಿದಳು ; ನರ್ತಿಸಿದಳು, ಲಕ್ಷಗಟ್ಟಲೆ ಜನರ ಮುಂದೆ. ಸಾವಿರಗಟ್ಟಲೆ ಹಣ ಸಂಗ್ರಹವಾಯಿತು. ಎಲ್ಲವೂ ರಕ್ಷಾರ್ಥಿಗಳ ನಿಧಿಗೆ, ಫಾಸಿಸ್ಟ್ ಮರ್ದನಕ್ಕೆ ಈಡಾದ ಜನರಿಗೆ.

ಚಂದರ್ ಆ ದಿನ ಉದ್ಬೋಧನೆ ಇತ್ತ : "ಪವಿತ್ರಭೂಮಿ ಕಳಂಕವಾಗದಿರಲಿ; ಇದ್ದ ಕಳಂಕ ತೊಡೆದು ಹೋಗಲಿ ; ನ್ಯಾಯಕ್ಕಾಗಿ ನಿರಂತರ ಹೋರಾಡಿರಿ" ಎಂದು.

o o o o o o

ಆ ರಾತ್ರೆ ಸುಹಾಸನ ಮನೆಯ ಟೆರೆಸಿನ ಮೇಲೆ ಸುಹಾಸನೂ ರತನಳೂ ನಿಂತಿದ್ದರು. ಮದ್ರಾಸಿಗೆ ಆಕ್ರಮಣದ ಭೀತಿಯಿತ್ತು. ನಗರ ಗಾಢಾಂಧಕಾರದಲ್ಲಿ ಮುಳುಗಿತ್ತು.....

"ರತನ !" ಎಂದ ಸುಹಾಸ.

ಅಯ್ಯನ್ನೆ !

ಭಾವೋದ್ರೇಕದಿಂದ ಅವನು ಮಾತನಾಡುತ್ತಿದ್ದನೆಂದು ರತನ ತಿಳಿದುಕೊಂಡಳು. ಅವನು ಬಳಿಸಾರಿ, ತನ್ನೊಂದು ಕೈಯನ್ನು ಅವನ ಹೆಗಲ ಮೇಲಿಟ್ಟಳು. ಇನ್ನೊಂದು ಕೈ ಸುಹಾಸ ಹಿಡಿದುಕೊಂಡ.

ಸುಹಾಸ ಹೇಳಿದ : "ನಮಗೆ ಬೆಳಕು ಬೇಕು, ಬೆಳಕು. ನಮ್ಮನ್ನೆಲ್ಲ ಈ ಅಂಧಕಾರದಿಂದ ಹೊರಗೊಯ್ಯುವ ಬೆಳಕು. ಮಾನವಕೋಟಿಯನ್ನು ಉದ್ಧರಿಸುವ ಬೆಳಕು."

"ನೀನು ಪ್ರವಾದಿಯಂತೆ ಮಾತನಾಡುತ್ತಿದ್ದೀಯಲ್ಲಾ !" ಎಂದು ರತನ ತನ್ನ ಕೋಕಿಲ ಕಂಠದಿಂದ ನುಡಿದಳು.

ಸುಹಾಸ ಉತ್ತರವಿತ್ತ :

"ಹುಂ ! ಪ್ರವಾದಿಯಂತೆ ಮಾತನಾಡುತ್ತಿದ್ದೇನೆ....ಏಕೆ ಕೂಡದು ? ಜಗತ್ತಿನ ನವನಿರ್ಮಾಣವಾಗಬೇಕೆಂದು ನನ್ನ ಮಹದಾಸೆ. ಎಲ್ಲಿ ಮನುಷ್ಯ ಮನುಷ್ಯನಂತೆ ಜೀವಿಸಬಲ್ಲನೋ, ಎಲ್ಲಿ ಸಮಾನ ಸ್ವಾತಂತ್ರ್ಯ-ಸೌಲಭ್ಯ-ಸೌಕರ್ಯಗಳಿರುವುವೋ, ಅಲ್ಲಿಗೆ ನಾವು ಸಾಗಬೇಕು. ಈ ಅಂಧಕಾರದಿಂದ ಮುಂದೆ ಸಾಗಬೇಕು....!"

ರತನ ಪಿಸುಮಾತಿನಲ್ಲೇ ಹೇಳಿದಳು...."ಹೌದು !"



ಏಪ್ರಿಲ್, ೧೯೪೩



# ಸಂಧಿಕಾಲ

ಅವನು ಹೊರಟು ಹೋದ. ಮತ್ತೆ ಎರಡು ತಿಂಗಳ ಕಾಲ ಬರಲಾರ. ಬರುವುದು ಕೂಡ ತನಗಾಗಿಯೆ? ತನಗೋಸ್ಕರ ಮಾತ್ರವಾಗಿಯೆ? ಎಷ್ಟಕ್ಕೂ ಅಲ್ಲ. ಏನಾದರೂ ಕೆಲಸವಿದ್ದರೆ, ತನ್ನಿಂದ ಉಪಯೋಗವಾಗುವಂತಿದ್ದರೆ, ಹಣ ಬೇಕಾಗಿದ್ದರೆ, ಸದ್ದಿಲ್ಲದೆ ಬಂದು "ಅನೂ!" ಎನ್ನುವ. ಎಲ್ಲ ದ್ವೇಷವನ್ನೂ ಮರೆಸುವ, ಮರುಳುಗೊಳಿಸುವ, ಸ್ವಪ್ನಾವಸ್ಥೆಗೆ ಒಯ್ಯುವ ಪ್ರೀತಿಯ ಎರಡಕ್ಷರ!

ಹಾಸಿಗೆಯ ತಲೆದಿಂಬು ಅನುಪಮಳ ಬಿಸಿಯುಸಿರಿನಿಂದ, ಕಾದ ಕಣ್ಣೀರಿನಿಂದ, ಮಲಿನವಾಯಿತು.

"ನಿಖಿಲ ಈ ದಿನ ಐದು ನಿಮಿಷವೂ ನಿಲ್ಲಲಿಲ್ಲವಲ್ಲ! ಮೆಲ್ಲನೆ ಬಂದು, ಬಾಗಿಲಿನಾಚೆ ನಿಂತು, 'ಅನೂ!' ಎಂದು ಇಳಿದನಿಯಲ್ಲಿ ಕರೆದುದು. 'ದೀಪ ಹಚ್ಚಬೇಡ!' ಎಂದು ಎಚ್ಚರಿಕೆ ಕೊಟ್ಟುದು; ಒಳಗೆ ಬಂದು ಹಸ್ತಪತ್ರಿಕೆಗಳ ಕಟ್ಟನ್ನು ಮಂಚದ ಕೆಳಕ್ಕೆ ನೂಕಿ, ಮೂಲೆಯಲ್ಲಿದ್ದ ತನ್ನೆರಡು ಬಟ್ಟೆಗಳನ್ನು ಎತ್ತಿಕೊಂಡು, 'ಈಗ ಹೋಗಲೇಬೇಕು ಮುದ್ದೂ' ಎಂದು ತಲೆಕೂದಲನ್ನು ನೇವರಿಸಿ, ಹಣೆಯನ್ನು ಚುಂಬಿಸಿ, ತಿರುಗಿ ಸದ್ದಿಲ್ಲದೆ ಹೊರಟುಹೋದುದು!"

"ಅಯ್ಯೋ! ಇದು ಕನಸು—, ಕನಸು! ನರಕ-ನರಕ!" ಎಂದು ಗೊಣಗುಟ್ಟಿದಳು ಅನು.

ಎಂತಹ ಪಾರ್ಟಿ ಇದು-ಗಂಡ ಹೆಂಡಿರೂ ಜೊತೆಯಾಗಿ ಬಾಳದಂತೆ ಮಾಡುವುದು?........

....ಇಂಗ್ಲೆಂಡಿನಿಂದ ನಿಖಿಲ ಮರಳಿದುದು ಯುದ್ಧ ಆರಂಭವಾದಾಗ, ವಿದ್ಯಾಭ್ಯಾಸವನ್ನು ಅರ್ಧದಲ್ಲೇ ನಿಲ್ಲಿಸಿ. ಹಿರಿಯ ಬಾಬುಗಳು ತಡಮಾಡದೆ ಮಗನ ಮದುವೆಯ ವ್ಯವಸ್ಥೆ ಮಾಡಿದರು. ನಿಖಿಲನನ್ನು ಅನುಪಮ ಹಿಂದೆಯೇ ಕಂಡಿದ್ದಳು. ಅವನು ಇಂಗ್ಲೆಂಡಿಗೆ ಹೋಗುವುದಕ್ಕೆ ಮುಂಚಿತವಾಗಿಯೊಮ್ಮೆ ; ಅನಂತರ ರಜೆಯಲ್ಲಿ ಸ್ವದೇಶಕ್ಕೆ ಬಂದಿದ್ದಾಗಲೊಮ್ಮೆ ; ಕಂಡು, ಮೆಚ್ಚಿದ್ದಳು. ಈ ಸ್ವಪ್ನಜೀವಿ, ಭಾವುಕ, ಧ್ಯೇಯವಾದಿ ತನ್ನ ಪತಿಯಾದರೆ ಹೇಗೆ ಎಂದು ಯೋಚಿಸಿದ್ದಳು. ಹಾಗೆ ಆದರೆ, ಆಗಬಹುದಾಗಿದ್ದ ವಿವಾಹಿತ ಜೀವನವನ್ನು ಕಲ್ಪಿಸಿದ್ದಳು. ಅದೇ ಕನಸು ನೆನಸಾಗುವ ಯೋಗ ! ಹುಚ್ಚು ಹುಡುಗಿ ಅನುಪಮ ನಿಖಿಲನಿಗೆ ಪತ್ರ ಬರೆದಳು ; ಕಾಣಬಯಸಿದಳು.

“ ಮದುವೆಯೆ ? ಊಹೂಂ ” ಎಂದಿದ್ದನಂತೆ ನಿಖಿಲ. ಆದರೆ ಅನು ಪತ್ರ ಬರೆದಾಗ ಅವಳ ಊರಿಗೆ—ಶಹರಕ್ಕೆ, ಹೋಗದಿರಲಿಲ್ಲ.

ಅನು ಬೆಳೆದಿದ್ದಳು; ಹಿಂದೆ ತಾನು ಕಂಡಿದ್ದ ಚಂಚಲ ಪತಂಗವಲ್ಲ.

“ ಸರಿ, ಸಂಕಷ್ಟ ಅನುಭವಿಸುವ ವಿಚಾರ ಹೇಗೆ ? ನನ್ನಿಂದಾಗಿ ನಿನಗೆ ಸುಖ ದೊರೆತೀತೆಂದು ಹೇಳಲಾರೆ ” ಎಂದ ನಿಖಿಲ.

“ ಭೂಲೋಕದ ಒಂದು ಧ್ರುವದಿಂದ ಇನ್ನೊಂದು ಧ್ರುವಕ್ಕೆ ನಿಮ್ಮ ಜತೆಯಲ್ಲಿ ಹೋಗಿ ಮರಳುವೆ ; ಗಗನಕ್ಕೆ ಏರುವೆ ; ಪಾತಾಳಕ್ಕೆ ಇಳಿಯುವೆ ” ಎಂದಳು ಅನುಪಮ, ಕವಯಿತ್ರಿಯಾಗಿ....

ನಿಖಿಲನಿಗೆ ನಗು ಬಂತು ; ಮೆಚ್ಚುಗೆಯ, ಆದರದ ನಗು. “ನನ್ನನ್ನು ಕಾಮ್ರೇಡ್ ಎನ್ನು ” ಎಂದನವ.

ಖೋ ಎಂದು ಗಟ್ಟಿಯಾಗಿ ಅನುಪಮ ನಕ್ಕುಬಿಟ್ಟಳು.

ಪತ್ನಿಯನ್ನು ಹಿಂದೆಯೇ ಕಳಕೊಂಡಿದ್ದ, ಮಗಳೊಬ್ಬಳೇ ಊರುಗೋಲಾಗಿದ್ದ, ಅವಳ ತಂದೆ “ ಮಕ್ಕಳು ಇದೇನು ಮಾಡುತ್ತಿದ್ದಾರೆ ” ಎಂದು ಗಾಬರಿಯಾದರು.

........ಆದರೆ ಈಗ ?

ಗಗನಕ್ಕೆ ಏರುವುದಲ್ಲ ; ಪಾತಾಳಕ್ಕೆ ಇಳಿಯುವುದಲ್ಲ. ಸಹಿಸಲಿಕ್ಕಾಗದ ಅನ್ಯಾಯವಾದ ಅಗಲುವಿಕೆ. ನಿಖಿಲ ಅಜ್ಞಾತವಾಸವನ್ನು ಆರಂಭಿಸಿಬಿಟ್ಟ ; ಯುದ್ಧವಿರುದ್ಧ ಕಾರ್ಯಗಳಲ್ಲಿ ಅವನು ನಿಮಗ್ನ-ಪಾರ್ಟಿಯ ಅನುಜ್ಞೆಯಂತೆ. ಮದುವೆಯಾಗಿ ಆರು ತಿಂಗಳೂ ಕಳೆದಿರಲಿಲ್ಲ. ಅಷ್ಟರಲ್ಲೇ....

ಆರು ತಿಂಗಳಾದರೂ........ಇಲ್ಲ; ಜತೆಯಾಗಿರಲಿಲ್ಲ. ಎರಡೇ ರಾತ್ರಿಗಳನ್ನು ಅವರು ಒಟ್ಟಿಗೆ ಕಳೆದಿದ್ದರು. ಮತ್ತೆ ಅನುಪಮ ತಂದೆಯ ಮನೆಗೆ, ನಿಖಿಲ ಕಲ್ಕತ್ತೆಗೆ, ಹೊರಟು ಹೋದರು.

....ಯುದ್ಧದ ಕಾವು. ಪೇಟೆಯ ಜೀವನ ಕಷ್ಟವೆನಿಸಿತು. ತಂದೆ ಕಾಲವಾದರು ; ಅನುಪಮ ಮಾವನ ಮನೆಗೆ, ಹಳ್ಳಿಗೆ, ಬಂದಳು. ಅನಂತರವೇ ಒಮ್ಮೊಮ್ಮೆ ನಿಖಿಲ ರಾತ್ರಿ, ಆಕಸ್ಮಿಕವಾಗಿ, ಕ್ಷಣಕಾಲ ದರ್ಶನ ಕೊಡತೊಡಗಿದುದು.

....ನಿಖಿಲನನ್ನು ಬೀಳ್ಕೊಟ್ಟ ಅನುಪಮೆಗೆ ನಿದ್ದೆ ಹತ್ತಲಿಲ್ಲ. ತನ್ನ ಒಂದು ಮಾತನ್ನು ಕೇಳುವಷ್ಟೂ ಬಿಡುವಿಲ್ಲವೆ ಅವನಿಗೆ? ಅಷ್ಟು ಪ್ರಧಾನವಾದುದೆ ಪಾರ್ಟಿಯ ಕೆಲಸ ?

ಆ ರಾತ್ರೆಯನ್ನು ಆಕೆ ಏಕಾಂಗಿನಿಯಾಗಿ ಕಳೆಯಬೇಕು. ತಾನು ಕೈ ಹಿಡಿದ ನಿಖಿಲನ ಮೇಲೆ ತನಗೆ ಅಧಿಕಾರವಿಲ್ಲ. ಸಹವಾಸವೂ ಕೂಡದು ; ಮಾತೂ ಸಲ್ಲದು. ದೀರ್ಘ ನಿಶ್ವಾಸದೊಡನೆ ಆಕೆಯ ಎಡ ಕೈ ಮಂಚದಿಂದ ಕೆಳಕ್ಕೆ ಸರಿದು ಕರಪತ್ರದ ಕಟ್ಟನ್ನು ಮುಟ್ಟಿತು. ಆ ಕಟ್ಟು! ನಾಳೆ ಅದೂ ಹೋಗುವುದು. ಕ್ಷೇಮ ಸಮಾಚಾರ ಕೇಳಲಿಕ್ಕೆಂದು ಬಂದು ಚಾಂದನ ತಂಗಿ ಅದನ್ನೊಯ್ಯುವಳು. ಚಾಂದ ಕಾಲೇಜಿನ ಹುಡುಗ. ಅನುಪಮಳಿಗೆ ತನ್ನ ಕಾಲೇಜು ಜೀವನವೂ ಸ್ಮರಣೆಗೆ ಬಂತು. ಒಂದು ವರ್ಷ ಕಲಾನಿಲಯಕ್ಕೆ ಹೋಗಿದ್ದಳಾಕೆ. ಅಲ್ಲಿ ಆಕೆಗೆ ಎಷ್ಟು ಮಿತ್ರರಿರಲಿಲ್ಲ ? ಶರಣ ? ಒಂದು ವೇಳೆ ಅವನನ್ನೇ

ಅಯ್ಯಸ್ಯೆ !

ಆಕೆ ಮದುವೆಯಾಗಿದ್ದರೆ ? ಮಜೀದ ? ಮುಸಲ್ಮಾನನಾದರೇನಾಯಿತು ? ಮಾನವತೆಯ ಮಾತನ್ನಾಡುವ ತನಗೆ ಅವನ ಕೈ ಹಿಡಿಯುವಷ್ಟು ಕೆಚ್ಚೂ ಇಲ್ಲವೆಂದೇ ?

ಜವ್ವನದ ಹಾಳು ಭಾವನೆಗಳು. ತೊಲಗು ತೊಲಗೆಂದರೂ ತಿರುಗಿ ತಿರುಗಿ ವಯ್ಯಾರವಾಗಿ ಇರುಳನ್ನು ಇರಿದು ಬರುವ ಯೋಚನೆಗಳು.

"ಅಯ್ಯೊ, ಎಷ್ಟು ಅಸಹ್ಯ ಜೀವನ !"

ಅನುಪಮಳಿಗೆ ಅಳು ಬಂತು.

o o o o o o

ನಿಖಿಲನ ತಂದೆಯ ಜಮೀನುಗಳಿದ್ದುದು ಅಸ್ಸಾಮಿನ ಕಾಶಾರ್ ಪೇಟೆಯ ಬಳಿಯಲ್ಲಿ; ಮನೆಯೂ ಅಲ್ಲೇ. ಬೇಕಿದ್ದರೆ ಸುಲಭದಲ್ಲೇ ಆಗರ್ಭ ಶ್ರೀಮಂತಿಕೆಯ ಸೋಗು ಹಾಕಿಕೊಳ್ಳಬಹುದಿತ್ತು. ಆದರೆ ಅನವಶ್ಯಕವಾಗಿ ಖರ್ಚು ಮಾಡುವುದಕ್ಕೆ ಅವರು ಸಿದ್ಧರಿರಲಿಲ್ಲ. ಮೇಲಣ ಮಧ್ಯಮವರ್ಗದವರಿಗೆ ಸಿಗುವ ಗೌರವ ತಮಗೂ ಸಾಕೆಂದು ಅವರು ನಿರ್ಧರಿಸಿದರು.

ಕಡು ಜಿಪುಣ ಜೀವನ. ತಮಗೆ ಸ್ವತಃ ಇಂಗ್ಲಿಷಿನ ವಿದ್ಯಾಭ್ಯಾಸವಿರದಿದ್ದರೂ ಮಕ್ಕಳಿಗೆ ಕೊರತೆ ಮಾಡಿರಲಿಲ್ಲ. ಹಿರಿಯುವನು ಪದವೀಧರನಾಗಿ, ಸೇವಾಸಕ್ತ ರಾಜಭಕ್ತನಾಗಿ, ಸಂಯುಕ್ತ ಪ್ರಾಂತದೊಂದು ಪಟ್ಟಣದಲ್ಲಿ ನ್ಯಾಯಾಧಿಕಾರಿಯಾಗಿದ್ದ. ಅಲ್ಲೇ ಜೀವನ. ಅಸ್ಸಾಮು ಅವನನ್ನು ಕರೆಯುತ್ತಿರಲಿಲ್ಲ. ಕರೆದರೆ ಬರುವುದಿಲ್ಲವೆಂದು ಅವನ ತಾಯಿಯಂತೂ ತಾನೇ ಹಿರಿಯ ಮಗನಲ್ಲಿಗೆ ಹೋಗುತ್ತಿದ್ದಳು. ಅಲ್ಲೇ ಇರುತ್ತಿದ್ದಳು. ಎರಡನೆಯವನು ಧ್ಯೇಯವಾದಿ ಗಾಂಧಿಭಕ್ತ. ಕೆಲವರ್ಷಗಳ ಅಂತರದಲ್ಲಿ ಹುಟ್ಟಿದ ಹುಡುಗ ನಿಖಿಲ. ಅವನ ತಂದೆ, ಮೊದಲು 'ಥೂ' ಎಂದು ಉಗುಳಿ ಮತ್ತೆ ಹೇಳುವಂತೆ, 'ಕಮ್ಯೂನಿಸ್ಟ್!'–ಅನಿಷ್ಟ ! ಅವರ ಪತ್ನಿ ಬೇರೆ ಹೆರಲಿಲ್ಲ. ದೊಡ್ಡ ಬಾಬುಗಳಿಗೆ ವ್ಯಾಮೋಹವಿದ್ದುದು ಮಕ್ಕಳ ಮೇಲಲ್ಲ; ಇನ್ನೊಬ್ಬರ ಆಸ್ತಿಯ ಮೇಲೆ;

ಸೊತ್ತಿನ ಮೇಲೆ. ನಿಡುದಾರಿದ್ರ್ಯದ ಬಾಲ್ಯದಿಂದ ಕಡುಕಾರ್ಪಣ್ಯದ ಸಿರಿವಂತಿಕೆಯ ವೃದ್ಧಾಪ್ಯಕ್ಕೆ ಅವರು ಹೇಗೆ ಬೆಳೆದರೆಂಬುದು ಒಂದು ದೊಡ್ಡ ಕತೆ; ಮಹಾ ಕತೆ. ಅದು ಅವರ ಕೈ ಕೆಳಗಿನ ನೂರಾರು ಕೃಷಿಕರಿಗೆ ಗೊತ್ತಿದೆ; ಮನೆಮಠಗಳನ್ನು ಕಳೆದುಕೊಂಡ ಹಲವಾರು ಭಿಕಾರಿಗಳಿಗೆ ಗೊತ್ತಿದೆ. ಯಾವ ಕಾದಂಬರಿಕಾರನೂ ಉಪಯೋಗಿಸಿ ಕೊಂಡಿಲ್ಲ ಆ ಕಥಾವಸ್ತುವನ್ನು.

ಹಿರಿಯ ಮಗನಿಂದ ಮನೆತನಕ್ಕೆ ಹುಟ್ಟುವಳಿಯಿಲ್ಲ. ಎರಡನೆ ಯುವನು, ಬಸಂತ, ಮನೆತನದ ಕೀರ್ತಿಗೆ ಕಳಂಕ ತರಲಾರ; ವೆಚ್ಚಕ್ಕೆ ಕಾರಣನಾಗಲಾರ- ಅಷ್ಟೆ. ಮೂರನೆಯುವನು ಥೂ-ಹಾಳಾಗಿ ಹೋದ; ಮದುವೆ ಮಾಡಿಯೂ ಹಾಳಾಗಿ ಹೋದ! ಆದರೆ ದೇವರು ದೊಡ್ಡವನು; ಭೂಮಿತಾಯಿ ಸುಪ್ರಸನ್ನೆ....ನೋಡಿಕೊಳ್ಳಬೇಕಾಗಿದೆ ಜಮೀನನ್ನು.

ನಿಖಿಲನ ರಾಜಕಾರಣ ತಂದೆಗೆ ಎಂದೂ ಅರ್ಥವಾದುದಿಲ್ಲ. ಊರಿನ ಮಾರಿಯ ಬೆಂಬಲಕ್ಕೆ ನಿಲ್ಲುವುದೆ? ಕಿಸಾನರನ್ನು ಹತೋಟಿಯಲ್ಲಿಟ್ಟು ಉತ್ಪತ್ತಿಯನ್ನು ಹೆಚ್ಚಿಸಲು ತಾವು ಯತ್ನಿಸುತ್ತಿರುವಾಗ ತಮ್ಮ ಮಗನೇ ಆ ಪೋಕರಿಗಳ ಪರವಾಗಿ ವಾದಿಸಬೇಕೆ? "ಇಂಗ್ಲಿಷ್ ವಿದ್ಯೆಯ ಫಲ" ಎನ್ನುವರೊಮ್ಮೆ. "ಅದು ಸರಿಯಲ್ಲ–ಹಿರಿಯುವನನ್ನು ನೋಡಬಾರದೆ? ಮನೆಗೆ ಹಣ ಕಳುಹುತ್ತಿಲ್ಲವಾದರೂ ಎಷ್ಟು ಸಂಭಾವಿತನಾಗಿದ್ದಾನೆ-ತಾಯಿಯನ್ನು ಸಾಕುತ್ತಿದ್ದಾನೆ!" ಎಂದು ಯೋಚಿಸುವರು ಮರು ಕ್ಷಣದಲ್ಲೆ. ನಿಖಿಲ್ ಹಾಗೇಕೆ ಕೆಟ್ಟುಹೋದನೆಂಬುದು ಅವರ ಸಮಸ್ಯೆ. ಅಂತೂ ಅವನು ಬಾರ್-ಎಟ್-ಲಾ ಆಗಲಿಲ್ಲ....

ಈ ರೀತಿ ದೀರ್ಘ ಚಿಂತನೆಯ ಬಳಿಕ "ಈಗಿನ ಹುಡುಗರೇ ಹೀಗೆ-ಕೆಟ್ಟವರ ಸಹವಾಸ" ಎಂದು ದೊಡ್ಡ ಬಾಬುಗಳು ನಿಟ್ಟುಸಿರು ಬಿಡುವರು.

ನಿಖಿಲ ಅಜ್ಞಾತವಾಸದಲ್ಲಿರತೊಡಗಿದಾಗ ಅವರು ಬಲು ಕ್ರುದ್ಧ ರಾದರು. ಅವನು ತಮ್ಮ ಮಗನಲ್ಲವೆಂದರು ಗರ್ಜಿಸಿದರು. ಆದರೆ,

ಈ ದ್ವೇಷ, ಮಕ್ಕಳು ತಮ್ಮಂತೆಯೇ ಆಗಲಿಲ್ಲವಲ್ಲಾ ಎಂಬ ನಿರಾಶೆ, ಮಾನಸಿಕ ದೌರ್ಬಲ್ಯ-ಎಲ್ಲವೂ ಸೇರಿ ಅನುಪಮೆಯ ಮೇಲೆ ಅವರಿಗೆ ಅತಿಯಾದ ಮಮತೆಯನ್ನು ಹುಟ್ಟಿಸಿದುವು.

ಅವಳನ್ನು ಸಂತೈಸಲಿಕ್ಕೆಂಬಂತೆ ದೊಡ್ಡ ಬಾಬು ಒಂದು ದಿನ, "ನಿಖಿಲ ಶುದ್ಧ ಹುಚ್ಚ !" ಎಂದರು.

"ನಿಮ್ಮಿಂದಲೂ ಬಿಡಿಸಲಿಕ್ಕಾಗದ ಹುಚ್ಚು" ಎಂದಳು ಅನುಪಮ ಕಟುವಾಗಿ. ಮಾವನಿಗೆ ದುಃಖ ಬಂತು. "ಆ ಒಕ್ಕಲಿನ ಗೇಣಿ ಬಾಕಿ ಇದೆ, ತರುತ್ತೇನೆ" ಎಂದು ಹೇಳಿ ಹೊರಟುಹೋದರು.

ಕಿಸಾನರ ಗಲಭೆ ಹೆಚ್ಚುತ್ತ ಹೋಯಿತು. ಯುದ್ಧವು ಆರಂಭವಾದ ಮೊದಲಿನ ಎರಡು ವರ್ಷಗಳು. ಕಿಸಾನ ಸಂಘದ ಬಿರುಗಾಳಿ ತಮ್ಮ ಒಕ್ಕಲುಗಳ ಬಳಿಗೆ ಬೀಸದಂತೆ ಮಾಡುವುದಕ್ಕೆ 'ಸಾಕೋ ಸಾಕು' ಎನಿಸಿತು ಅವರಿಗೆ. ಈ ಕಾರ್ಯದಲ್ಲಿ ಸರಕಾರದಿಂದ ನೆರವು ಸಿಕ್ಕಿತು. ಬಾಡಿಗೆಯ ಪೋಲೀಸರು ಬಾಬುಗಳ ಮನೆತನದ ರಕ್ಷಕರಾದರು.

ಕಾಂಗ್ರೆಸಿಗ ಬಸಂತ ಬಾಬುವಿನ ತಲೆಯಲ್ಲಿ ತತ್ವಗಳ, ಭಿನ್ನ ಅಭಿಪ್ರಾಯಗಳ, ಹೊಯ್ದಾಟ. ಮಂತ್ರಿ ಮಂಡಲ ಸ್ವೀಕಾರಕ್ಕೆ ಮುಂಚೆ ನಡೆದ ಚುನಾವಣೆಯಲ್ಲಿ ಕಾಂಗ್ರೆಸ್ ಎಂ.ಎಲ್.ಎ. ಉಮೇದ್ವಾರನಾಗಿ ನಿಲ್ಲಲು ಅವರು ಬಯಸಿದ್ದರು. ಪಕ್ಷದ ಮುಖಂಡರು ಬೇರೊಬ್ಬರನ್ನು ಆರಿಸಿದರು. ಇವರ ಬಯಕೆ ಈಡೇರಲಿಲ್ಲ. ಸ್ಥಾನಕ್ಕಾಗಿ ಆಗುತ್ತಿದ್ದ ತಿಕ್ಕಾಟವನ್ನು ನೋಡಿ ಬಸಂತ ಬಾಬುವಿಗೆ ಬೇಸರ ಹುಟ್ಟಿತು. ನಿಖಿಲನೂ ಹೇಳುತ್ತಿದ್ದ : "ಕಾಂಗ್ರೆಸು ನಿಜಕ್ಕೂ ಜನತೆಯದಾಗಲಿ" ಎಂದು. ಅದು ಸರಿ ಎನ್ನಿಸುವುದು ಬಸಂತರಿಗೆ ಒಮ್ಮೊಮ್ಮೆ. ಆದರೆ ಗಾಂಧಿಯನ್ನು ಸ್ಮರಿಸಿ ಅವರು ಎಲ್ಲವನ್ನೂ ಮರೆತುಬಿಡುವರು. ಪೋಲೀಸರ ಸಹಾಯದಿಂದ ತಂದೆ, ಒಕ್ಕಲುಗಳನ್ನು ಮರ್ದಿಸುವುದನ್ನು ಅವರು ಒಪ್ಪುತ್ತಿರಲಿಲ್ಲ. ಕಿಸಾನರ ಕೇಳಿಕೆ ನ್ಯಾಯವಾದುದೆಂಬ ಕಾರಣದಿಂದಲ್ಲ, ಸರಕಾರದ ಸಹಕಾರ ಪಡೆಯುವುದು ಸರಿಯಲ್ಲ ಎಂದು !

ಅಜ್ಞಾತನಿದ್ದಲ್ಲಿಂದಲೇ ತಂದೆಗೆ ಎರಡು ಪತ್ರ ಬರೆದು ನಿಖಿಲ ಎಚ್ಚರಿಕೆಯ ಮಾತನ್ನಾಡಿದ "ಅಪ್ಪಾ! ಜನದ್ರೋಹಿಯಾಗದಿರು!" ದೊಡ್ಡ ಬಾಬುಗಳು ಕೋಪದಿಂದ ಉರಿದು ಸಿಕ್ಕಸಿಕ್ಕವರಿಗೆಲ್ಲ ಆ ಕಾಗದವನ್ನು ತೋರಿಸಿದರು. ಅಲ್ಲೇ ನೂರು ಗಜಗಳ ಅಂತರದಲ್ಲಿದ್ದ ಬಸಂತನ ಮನೆಗೆ ಹೋಗಿ ರಂಪಾಟ ಮಾಡಿದರು. ಇತ್ತ ತಮ್ಮ ಮನೆಯಲ್ಲಿ ಅನುಪಮಳ ಎದುರು ಗದ್ದಲವೆಬ್ಬಿಸಿದರು.

"ಈ ಮನೆಯೊಳಗಿನ್ನು ಕಾಲಿಡಲಿ ನೋಡುತ್ತೇನೆ....ಹಿಡಿದು ಪೋಲೀಸರಿಗೆ ಕೊಡುವೆ........ಕುಲಕುಠಾರ" ಎಂದರು.

ತಡೆಯಲಾರದೆ ಅನು ಬಿಕ್ಕಿ ಬಿಕ್ಕಿ ಅತ್ತಳು.

ಆದರೆ ನಿಖಿಲನನ್ನು ಹಿಡಿಸುವ ಕೆಲಸಕ್ಕೇನೂ ಅವನ ತಂದೆ ಹೋಗಲಿಲ್ಲ. ಅವನು ಒಮ್ಮೊಮ್ಮೆ ಬಂದು ಅನುಪಮೆಯನ್ನು ಕಂಡು ಹೋಗುತ್ತಿದ್ದುದು ಬಾಬುಗಳಿಗೆ ಗೊತ್ತಿರಲಿಲ್ಲವೆಂತಲ್ಲ. "ಸತ್ತು ಕೊಳ್ಳಲಿ-ಹುಡುಗಿಯ ಮೇಲಿನ ಪ್ರೀತಿಯಿಂದಾದರೂ ಹಾದಿಗೆ ಬರ ಬಹುದು" ಎಂಬುದು ಅವರ ಯೋಚನೆ. ಮಗ ಪತ್ನಿಯನ್ನು ಕಾಣು ತ್ತಿರುವುದು ಮಾತ್ರವೇ ಅಲ್ಲ; ತನ್ನ ಗುಪ್ತಕಾರ್ಯಗಳಲ್ಲಿ ಆಕೆಯನ್ನು ಜತೆಗಾತಿಯಾಗಿಯೂ ಮಾಡುತ್ತಿದ್ದಾನೆ ಎಂಬುದು ತಂದೆಗೆ ತಿಳಿದಿರಲಿಲ್ಲ.

○ ○ ○ ○ ○ ○

ನಿಖಿಲನ ಬಂಧನವಾಯಿತು. ೧೯೪೧ ರ ಜನವರಿ ರಾಷ್ಟ್ರೀಯ ಪತ್ರಿಕೆಯಾದ "ಅಮೃತ ಬಜಾರ" ದಲ್ಲಿ ಎಲ್ಲೋ ಒಂದು ಮೂಲೆಯಲ್ಲಿ ಮೂರು ಗೆರೆಗಳಲ್ಲಿ ಆ ವಾರ್ತೆಯನ್ನು ಪ್ರಕಟಿಸಿದ್ದರು. ಅದೇ ಪತ್ರಿಕೆಯ ಇನ್ನೊಂದು ಪಾನಿನಲ್ಲಿ ಬಸಂತ ಕುಮಾರರು ವೈಯಕ್ತಿಕ ಸತ್ಯಾಗ್ರಹ ಮಾಡಲಿದ್ದಾರೆ ಎಂಬ ಶಿರೋನಾಮೆ ಇತ್ತು.

ದೊಡ್ಡ ಬಾಬುಗಳ ಮಗನನ್ನು ಕರೆದರು. "ಇದೇನು ಹುಚ್ಚು?" ಎಂದು ಗದರಿಸಿದರು. ಸೊಸೆ ಗಂಡನ—ಮಾವನ ಕಾಲು ಹಿಡಿದಳು.

ಅನುಪಮ ತನ್ನ ಜೀವನ ಸಂಗಾತಿಯ ಕುರಿತು, ಮತ್ತು ಭಾವ ಮೈದುನನ ಕುರಿತು, ಪತ್ರಿಕೆಯಲ್ಲಿ ಬಂದಿದ್ದುದನ್ನು ಓದಿದಳು; ಯೋಚಿಸಿದಳು. ವೈಯಕ್ತಿಕ ಸತ್ಯಾಗ್ರಹಕ್ಕೆ ಇಷ್ಟು ಹೆಚ್ಚಿನ ಮೌಲ್ಯವೆ?

ಬಸಂತ ಕುಮಾರರು ಸತ್ಯಾಗ್ರಹ ಮಾಡಲಿಲ್ಲ.

ನಿಖಿಲನ ಬಿಡುಗಡೆಯಾಗಲಿಲ್ಲ.

ಮತ್ತೆ ನಾಲ್ಕು ತಿಂಗಳನ್ನು, ದೀರ್ಘ–ಕೊನೆ ಇಲ್ಲದ ನಾಲ್ಕು ಯುಗಗಳಂತೆ ಅನು ಕಳೆದಳು. ಒಮ್ಮೊಮ್ಮೆ ತನ್ನ ಜೀವನ ನೀರಸವಾಯಿತು ಎಂದು ಅವಳಿಗೆ ತೋರುವುದು; ದಾಪಂತ್ಯ ವಿರಸವಾಯಿತು ಎನ್ನಿಸುವುದು.... "ಈ ಸ್ಥಿತಿ ಹೀಗೆಯೇ ಸಾಗದು" ಎಂಬ ಆಸೆಯೂ ತಲೆದೋರುವುದು !

ನಾಲ್ಕು ತಿಂಗಳ ಕೊನೆಯಲ್ಲಿ ದೊಡ್ಡ ಬಾಬು ಮನೆಯಲ್ಲಿಲ್ಲದ ಹೊತ್ತಿನಲ್ಲಿ ಬೇಡಲು ಬಂದವನೊಬ್ಬನು ನಿಖಿಲನಿಂದ ಅನುಪಮೆಗೊಂದು ಪತ್ರ ತಂದ. "ಬೇಗನೆ ಬರುವೆ–ನಮ್ಮವರಿಗೆ ನೆರವಾಗು" ಎಂದು ಅದರಲ್ಲಿ ಬರೆದಿತ್ತು.

**ನಮ್ಮವರು ?**

ಉದ್ವೇಗದಿಂದ ಅನುಪಮಳ ಹೃದಯ ಬಡಿದುಕೊಂಡಿತು. ಎಷ್ಟು ವಿಶ್ವಾಸದಿಂದ ಗಂಡ ಬರೆದಿದ್ದಾನೆ; ಎಷ್ಟು ಪ್ರೀತಿ ತನ್ನ ಮೇಲೆ. ಮತ್ತೆ ಪುನಃ ಯೋಚನೆಗಳು. ಅದು ತನ್ನ ಮೇಲಿನ ಪ್ರೀತಿಯೆ? ಪಾರ್ಟಿಯ ಮೇಲಿನದೆ?.... ಪುನಃ ಸಂಶಯ ನಿರಸನ; ಭ್ರಮೆ ನಿವಾರಣೆ.

ಅಂದಿನಿಂದ ಹೊತ್ತಲ್ಲದ ಹೊತ್ತಿನಲ್ಲಿ, ಮನೆಯವರ ಕಣ್ಣು ತಪ್ಪಿಸಿ ಯಾರಾದರೂ ಬಂದು "ಆಕ್ಷೇಪಾರ್ಹ ಸಾಹಿತ್ಯ" ವನ್ನು ತಂದು ಕೊಡುತ್ತಿದ್ದರು. ಚಾಂದನ ತಂಗಿ ಹಿಂದಿನಂತೆಯೇ ಬಂದು ಕಟ್ಟುಗಳನ್ನು 'ಕದ್ದೊಯ್ಯು'ತ್ತಿದ್ದಳು.

....ಮೇ ತಿಂಗಳಲ್ಲೊಂದು ದಿನ ಗುಪ್ತ ಪೋಲೀಸರ ಪಡೆ, ಸಶಸ್ತ್ರ ಪೋಲೀಸರ ಪಡೆ, ದೊಡ್ಡ ಬಾಬುಗಳ ಮನೆಯನ್ನು ರಾತ್ರಿ ಹೊತ್ತಿ

ನಲ್ಲಿ ಪ್ರವೇಶಿಸಿತು.' "ಹೀಗೂ ಉಂಟೆ?" ಎಂದರು ಬಾಬು. ಪೋಲೀಸರು ಮನೆಯ ಕೋಣೆ ಕೋಣೆಗಳನ್ನು ಶೋಧಿಸಿದರು. ಅನುಪಮೆಗೆ ತಿಳಿಯಿತು ಬೇಟೆ ಯಾರಿಗೋಸ್ಕರ ಎಂದು. ಅವಳ ಕೋಣೆಯಲ್ಲಿ "Communist" ಪತ್ರಿಕೆಯ ನಾಲ್ಕು ಪ್ರತಿಗಳಿದ್ದುವು. ಅನು ಅವನ್ನು ಕುರ್ಚಿಯ ಮೇಲೆ ಹಾಕಿ, ಸೀರೆಯಿಂದ ಮುಚ್ಚಿ ತಾನೇ ಅದರ ಮೇಲೆ ಕುಳಿತುಬಿಟ್ಟಳು. ಪೋಲೀಸರು ಬಂದಾಗ ಏಳಲಿಲ್ಲ; ಮಾವ ಕಂಡಾಗ ಕದಲಲಿಲ್ಲ. ಏನೂ ಸಂಶಯಪಡದೆ ಬಂದವರು ಹಿಂತಿರುಗಿದರು.

"ಇಷ್ಟೆಲ್ಲ ಅವನಿಂದಾಗಿ–ನಿಖಿಲ ಜೈಲಿನಿಂದ ತಪ್ಪಿಸಿಕೊಂಡಿದ್ದಾನಂತೆ. ನಾಚಿಕೆಗೇಡು!" ಎಂದರು ಮಾವ.

ಸೆರೆಮನೆಯಿಂದ! ತನ್ನ ನಿಖಿಲ?

ಪತ್ರಿಕೆಯವರು ಈ ವಾರ್ತೆ ಕೊಟ್ಟಿರಲಿಲ್ಲ. ಆದರೆ ದೊಡ್ಡ ಬಾಬುಗಳ ಮನೆಯನ್ನು ಪೋಲೀಸರು ಶೋಧಿಸಿದ ವಾರ್ತೆ ಬರದಿರಲಿಲ್ಲ.

ಪ್ರತಿ ರಾತ್ರಿಯೂ ಅನುಪಮ ಕಾದಿರುತಿದ್ದಳು-ನಿಖಿಲನಿಗಾಗಿ. ಹತ್ತು ದಿನಗಳಾದರೂ ಅವನು ಬರಲಿಲ್ಲ.

....ಆ ಸಂಜೆ ಅನು ಅತ್ತಿಗೆಯ ಮನೆಗೆ ಹೋಗಿದ್ದಳು. ಅಲ್ಲಿ ಬಸಂತರ ಚಿಕ್ಕ ಮಗುವಿನೊಡನೆ ಆಟ.

ನಿಖಿಲನನ್ನು ಕುರಿತು "ಸುಮ್ಮನಾದರೂ ಬೇಡದ ಕೆಲಸ.... ಪ್ರಾಣಕ್ಕೂ ಅಪಾಯ" ಎಂದರು ಅತ್ತಿಗೆ. ಅನುಪಮೆಯನ್ನು ಯಾವಾಗಲೂ ಚಿಕ್ಕ ಮಗುವಿನಂತೆ ಕಾಣುತ್ತಿದ್ದ ಬಸಂತರು "ಹೇಳಿದರೆ ಕೇಳಬೇಕಲ್ಲ" ಎಂದರು. ಅನು ಮರು ಮಾತಾಡಲಿಲ್ಲ. ನಿಖಿಲ ಮಾಡುತ್ತಿರುವುದು ನಿಜಕ್ಕೂ ತಪ್ಪೆ?

ರಾತ್ರಿಯಾಗಿತ್ತು ಹಿಂದಿರುಗುತ್ತಿದ್ದಾಗ. "ಅನೂ!" ಎಂದಿತೊಂದು ಸ್ವರ. ಅದು ನಿಖಿಲನದು. ಚಕಿತಳಾಗಿ ಕಲ್ಲುಗೊಂಬೆಯಂತೆ ಅನು ನಿಂತಳು. ನಿಖಿಲ ಬಳಿಗೆ ಬಂದಾಗ ಎರಡೂ ಕೈಗಳಿಂದ ಅವನ ಕೊರಳನ್ನು ಆವರಿಸಿದಳು.

ಅಯ್ಯನ್ನೆ !

ಮೂಕವಾಗಿ ಪರಸ್ಪರ ನೋಡಿಕೊಳ್ಳುವುದರಿಂದಲೇ ಎಷ್ಟೋ ಮಾತುಗಳನ್ನು ಆಡಿದ ಹಾಗಾಗುತ್ತದೆ. ಪತ್ನಿಯ ಉನ್ಮಾದವನ್ನು ನಿಲ್ಲಿಸಬೇಕಾಗಿತ್ತು ನಿಖಿಲನಿಗೆ.

"ನೀನು ಇನ್ನೂ ಸ್ವಲ್ಪ ದಿನ ಬರದಿರುತ್ತಿದ್ದರೆ ಏನಾಗುತ್ತಿತ್ತೋ ಏನೋ" ಎಂದಳು ಅನುಪಮ.

ಇನ್ನೂ ಪೂರ್ಣ ಸುಧಾರಿಸಿಲ್ಲ ಪಾಪ ! ಪೂರ್ಣ ಬೆಳೆದಿಲ್ಲ. ಅನು, ಪೋಲೀಸರು ಬಂದಿದ್ದ ವಾರ್ತೆ ಹೇಳಿದಳು. ನಿಖಿಲನಿಗೆ ಅದು ತಿಳಿದಿತ್ತು. ಮನೆಯೊಳಕ್ಕೆ ಬರುವಂತಿಲ್ಲ. ತಂದು ಕೊಟ್ಟರೆ ಏನಾದರೂ ತಿಂಡಿ-?

"ಬೇಡ-ಬೇಡ....ಇನ್ನೊಂದು ವಾರ, ಇಷ್ಟೇ ಹೊತ್ತಿಗೆ, ಇಲ್ಲೇ. ಸ್ವಲ್ಪ ಹೆಚ್ಚು ತಾ.... ಅಡುಗೆಯವಳಿಗೆ ಗೊತ್ತಾಗಬಾರದು....ನೂರು ರೂಪಾಯಿಯೂ ಬೇಕು" ಎಂದು ನಿಖಿಲ ಹೊರಟುಹೋದ.

ಹೂದೋಟದ ಗೋಡೆಗೊರಗಿ ಅನು ಅತ್ತಳು, ಬಿಕ್ಕಿಬಿಕ್ಕಿ. ಹಣೆಗಲ್ಲದೆ ಬೇರೆಲ್ಲಿ ಚುಂಬಿಸುವುದಕ್ಕೂ ನಿಖಿಲನಿಗೆ ತಿಳಿಯದೆ ? ತನ್ನ ನಿಖಿಲ ತನ್ನವನೇ ಆಗುವುದು ಎಂದಾದರೂ ಸಾಧ್ಯವೆ ?....ಅಕೆ ಮನೆ ಸೇರಿದಾಗಲಿನ್ನೂ ಮಾವ ಮನೆಗೆ ಮರಳಿರಲಿಲ್ಲ.

೪

"ರಷ್ಯದ ಮೇಲೆ ನಾಜಿಗಳು ಯುದ್ಧ ಸಾರಿದರು !"

ರಷ್ಯ ? ಅಲ್ಲಿ ಸ್ತ್ರೀಯರಿಗಿರುವ ಸ್ವಾತಂತ್ರ್ಯ, ಆಗುತ್ತಿರುವ ಸೃಷ್ಟಿ ಇವೆಲ್ಲವನ್ನು ಅನುಪಮ ತಿಳಿದಿದ್ದಳು. ಆದರೆ ನಿಖಿಲನ ಮೇಲೆ ಆ ಘಟನೆ ಮಾಡಿದ ಪರಿಣಾಮವನ್ನು ಅವಳು ಊಹಿಸಿರಲಿಲ್ಲ.

ಕೆಲ ದಿನಗಳ ಅನಂತರ ರಾತ್ರೆ, ಬಸಂತರು ಕಶಾರಿಗೆ ಹೋಗಿದ್ದಾಗ, ತಂದೆ ಊರಲ್ಲಿಲ್ಲದಾಗ, ನಿಖಿಲ ಮನೆಗೆ ಬಂದ. ಅನುಪಮಳ ಕೋಣೆಯಲ್ಲಿಯೆ ಊಟವಾಯಿತು. "ಮಲಗುವುದಕ್ಕೆ ಬಿಡುವಿದೆಯೆ?" ಎಂದಳು ಅನು.

" ಇಲ್ಲ....ಸ್ವಲ್ಪ ಹೊತ್ತು ಇದ್ದು ಹೋಗುವೆ. "

ಕತ್ತಲ ಕೋಣೆಯಲ್ಲಿ ಅವರು ಕುಳಿತರು.

ನಿಖಿಲ ಹೇಳಿದ : " ಜೂನ್ ೨೨ ರಂದು ಯುದ್ಧದ ರೂಪ ಬದಲಿಸಿತು. "

ಒಂದೂ ಹೊಳೆಯದೆ " ಏನದು ? " ಎಂದಳು ಅನು.

" ಯುದ್ಧದ ರೂಪ ಬದಲಿಸಿತು ಎಂದೆ. ಇನ್ನು ಇದು ಎರಡು ಸಾಮ್ರಾಜ್ಯಶಾಹಿಗಳೊಳಗಿನ ಯುದ್ಧವಲ್ಲ. ಜಗತ್ತಿನ ಆರರಲ್ಲೊಂದಂಶ ರಾಷ್ಟ್ರದ ಮೇಲೆ, ಜನತೆಯ "ರಾಷ್ಟ್ರದ ಮೇಲೆ, ಹಿಟ್ಲರ್ ಯುದ್ಧ ಸಾರಿದ್ದಾನೆ. ರಷ್ಯದ ಮೇಲಿನ ಯಾತ್ರೆ ದುಷ್ಟ ಶಕ್ತಿಯ ಮಸಣದ ಯಾತ್ರೆ...."

ಮರುಮಾತಾಡದೆ ಅನು ಇದಕ್ಕೆ ಕಿವಿಕೊಟ್ಟಳು.

" ರಷ್ಯದಲ್ಲಿ ರೂಪಗೊಳ್ಳುತ್ತಿರುವುದು ಲೋಕದೆಲ್ಲ ದಲಿತರ ಕನಸು. ಅದು ಮಣ್ಣುಗೂಡಿದರೆ ಮತ್ತೆ ಜಗತ್ತಿಗೆ ಅಳಿಗಾಲ. ಈ ಯುದ್ಧ ಜನರದು ; ಜನತೆ ಜಯಿಸಬೇಕು ! ಸಾಮ್ರಾಜ್ಯವಾದಿ ಚರ್ಚಿಲ್ಲರು ಉಳಿಯಲಾರರು " ಎಂದು ನಿಖಿಲ ವಾದ ಮುಂದುವರಿಸಿದ.

" ಈ ನಿಮ್ಮ ಬಡ ದೇಶವೊ? " ಎಂದಳು ಅನು ವ್ಯಂಗ್ಯವಾಗಿ.

ನಿಖಿಲ ಬಲು ತಾಳ್ಮೆಯಿಂದ ವಿವರಿಸ ಹೊರಟ...." ನಮ್ಮ ದೇಶವೂ ನಮ್ಮದಾಗುವುದು....ಪ್ರತಿ ರಾಷ್ಟ್ರದ ಜನತೆಯ ಬೆಂಬಲ ನಮಗೆ ಸಿಗುವುದು."

"ಯುದ್ಧ ಯತ್ನಕ್ಕೆ ವಿರೋಧವಿಲ್ಲವೆಂದಾದರೆ ಇನ್ನು ನೀನು ಹೊರಗೆ ಬರಬಹುದಲ್ಲವೆ ? " ಎಂದಳು ಅನು ಕೊನೆಗೆ.

ಅದು ಸಾಧ್ಯವಿಲ್ಲ !

ನಿಖಿಲ ಹೊರಟು ಹೋದ ಬಳಿಕ, ಹಾಸಿಗೆಯಲ್ಲಿ ಹೊರಳಾಡುತ್ತ ನಿಖಿಲನ ಮಾತುಗಳನ್ನು ಅನು ವಿವರಿಸಿ, ಯೋಚಿಸಲೆತ್ನಿಸಿದಳು....ಎಲ್ಲವೂ ಅಸ್ಪಷ್ಟವಾಗಿ ಕಂಡಿತು....ಅಲ್ಲಿಯೇ ನಿದ್ದೆ ಹತ್ತಿತು.

ಅಯ್ಯನ್ನೆ !

ಸ್ವಲ್ಪಕಾಲದ ಮೇಲೊಮ್ಮೆ ಮನೆಯ ಮುಂಭಾಗದಲ್ಲಿ ಕುಳಿತು ಬಸಂತ ಕುಮಾರರು ತಂದೆಯ ಎದುರಲ್ಲಿ ರಾಜಕಾರಣವನ್ನು ಚರ್ಚಿಸುತ್ತಿದ್ದರು. ಅನುಪಮೆಗೆ ಅದು ಕೇಳಿಸುತಿತ್ತು.

ಇದು ಜನತಾಯುದ್ಧ ಎನ್ನುವವರ ಮೇಲೆ ದೊಡ್ಡ ಧಾಳಿ ನಡೆಸಿದ್ದರು ಬಸಂತರು. 'ತಮ್ಮ ಪಿತೃಭೂಮಿ ಯುದ್ಧಕ್ಕೆ ಗುರಿಯಾಯಿತೆಂದೊಡನೆ ಲೋಕವೇ ಕಳಚಿಬಿತ್ತು ಇಲ್ಲಿನ ಕೆಲವರಿಗೆ ! '

ದೊಡ್ಡ ಬಾಬುಗಳ ತಲೆಗೆ ರಾಜಕಾರಣ ಹೆಚ್ಚಾಗಿ ಹೊಗುತ್ತಿರಲಿಲ್ಲ ಆ ಹೊತ್ತಿನಲ್ಲಿ........ಏರುತ್ತಿದ್ದ ಬೆಲೆಯ ಪ್ರಶ್ನೆಗೆ ಮಾತ್ರ ಅಲ್ಲಿ ಎಡೆ ಇತ್ತು. ಆ ಕಾಲದಲ್ಲೆ ಹಣ ಮಾಡಬೇಕಾದುದು.

ಆದರೂ ಮಧ್ಯದಲ್ಲೊಮ್ಮೆ "ನಿಖಿಲ ಇನ್ನು ಮನೆಗೆ ಬರುವನೋ?" ಎಂದು ಅವರು ಕೇಳಿದರು.

" ಬರಲಾರ ; ಅವನ ಮೇಲೆ ಕೈದು ವಾರಂಟಿದೆ "

—ಆ ವರ್ಷದ ಕೊನೆಯಲ್ಲಿ ಜಪಾನು ದಂಡವೆತ್ತಿತು. ಶೋಷಣೆ, ಹಣ ಸಂಪಾದನೆಯೊಂದರಲ್ಲೇ ಮಗ್ನವಾಗಿದ್ದ ಬಿಳಿಯ ಆಳುವವರ್ಗ ಇಳಿದು ಹೋಯಿತು.

ಸಾಮಗ್ರಿಗಳ ಬೆಲೆ ಈ ದೇಶದಲ್ಲಿ ಏರತೊಡಗಿದುದು ಆಗಲೇ. ದೊಡ್ಡ ಬಾಬುಗಳು ಆಸಕ್ತಿಯಿಂದ ಪತ್ರಿಕೆಯೋದುತ್ತಿದ್ದರು. ಬಸಂತ ಕುಮಾರರು " ಬ್ರಿಟಿಷ ಸಾಮ್ರಾಜ್ಯಕ್ಕಿನ್ನು ಅ ಸ್ತ ಮಾ ನ ಕಾ ಲ " ಎನ್ನುತ್ತಿದ್ದರು.

" ಅತಿಮಾನವತೆಯ, ಮದಾಂಧತೆಯ ಮತ್ತೊಂದು ಶಾಹಿ ಎದ್ದಿದೆ; ಎಚ್ಚರ !" ಎಂದಿತು ನಿಖಿಲನ ಕರಪತ್ರ.

" ಚೀನಾದ ನೂರಾರು ಮಿಲಿಯ ಬಂಧುಗಳ ರಕ್ತದ ಹೊಳೆ ಹರಿಸುವ ಪಾಪಿಗಳನ್ನು ನಾವು ಇದಿರಿಸುವೆವು........! ಬ್ರಿಟಿಷರಿಗಾಗಿಯಲ್ಲ, ನಮಗಾಗಿ ಈ ದೇಶವನ್ನು ರಕ್ಷಿಸುವೆವು!"—ಇದು ನಿಖಿಲನ ರಣ ಗರ್ಜನೆ.

"ನೋಡಿ! ಜಪಾನರನ್ನು ಇದಿರಿಸಬೇಕಂತೆ," ಎಂದರು ಬಸಂತರು ವ್ಯಂಗ್ಯವಾಗಿ ನಗುತ್ತ.

ಇದಿರಿಸುವುದು? ಏನನ್ನು ಇದಿರಿಸುವುದು?—ದೊಡ್ಡ ಬಾಬುಗಳಿಗೆ ಅದೆಲ್ಲ ಅರ್ಥವಿಲ್ಲದ ಮಾತು. ಅಕ್ಕಿಯ ಮಣಕ್ಕೆ ಆಗ ೨೫ ರಿಂದ ೩೦ ರೂ. ಅಷ್ಟಕ್ಕೇ ಹಾರಾಟ ಮಾಡಬೇಕೇ? ಬೆಲೆ ಮತ್ತೂ ಏರಬಹುದೆ? ಸಂಶಯ ದೃಷ್ಟಿಯಿಂದ ಅವರು ಅಧಿಕಾರಿಗಳನ್ನು ನೋಡತೊಡಗಿದರು. ಗೆಳೆತನವೆಲ್ಲ ಕಳೆದ ದಿನಗಳ ಮಾತು.

"ಜಪಾನನ್ನು ಇದಿರಿಸುವ ನಿಖಿಲನನ್ನೂ ಸರಕಾರ ಬಂಧಿಸೀತೆ?"

"ಅವನು ಸೆರೆಯಿಂದ ತಪ್ಪಿಸಿಕೊಂಡವನು; ಕೈದು ವಾರಂಟು ಇದ್ದೇ ಇದೆ........"

—ನಿಖಿಲನ ಪಾರ್ಟಿ ಕ್ರಮಬದ್ಧವಾಯಿತು. ಅನುಪಮೆಯೂ ಜೀವನ ಸಂಗಾತಿಯ ಉತ್ಸಾಹದಲ್ಲಿ ಭಾಗಿಯಾದಳು.

ಆದರೂ ಶಂಕಿಸುತ್ತ, "ಬ್ರಿಟಿಷ್ ಸರಕಾರ ನಮ್ಮನ್ನು ಉಪಯೋಗಿಸುತ್ತಾ ಇದೆ; ಅಲ್ಲವೆ ನಿಖಿ?" ಎಂದಳು.

ಕತ್ತಲಲ್ಲಿ ನಿಖಿಲನ ಮುಗುಳ್ನಗು ಕಾಣುತ್ತಿರಲಿಲ್ಲ.

"ಇರಬಹುದು ಅನೂ, ಅವರು ಹಾಗೆ ಭಾವಿಸಿರಬಹುದು. ಆದರೆ, ನಮಗೆ ಸರಿಯೆಂದು ತೋರಿದುದನ್ನು ನಾವು ಮಾಡಲೇ ಬೇಕಲ್ಲವೆ?"....

ಊಟವಾದ ಮೇಲೆ ಬಸಂತರು ಲಾಟಾನು ಹಿಡಿದುಕೊಂಡು ತಂದೆಯ ಮನೆಗೆ ಬರುವರು. ಅಲ್ಲಿ ಆ ದಿನದ ಪತ್ರಿಕೆಯನ್ನೋದಿ ಚರ್ಚೆಯಾಗುವುದು ಅನುದಿನದ ಪರಿಪಾಠ. ಅನುಪಮ ಕಿವಿಕೊಡುವ ಕೆಲಸ ಮಾಡುವಳು.

ಯಾವ ತೃಪ್ತಿಯೋ ಏನೋ, ಸಣ್ಣ ತಮ್ಮನನ್ನು ಬಸಂತರು ಸದಾ ಟೀಕಿಸುವವರೇ.

"—ರಷ್ಯದ ಅನುಜ್ಞೆಯಾದರಾಯಿತು. ಅದೇ ವೇದ ವಾಕ್ಯ; ಅದೇ ಅಮರ ಸತ್ಯ........" ಎಂದರೊಮ್ಮೆ ಬಸಂತರು.

ಅನುಪಮ ಥಟ್ಟನೆ “ ಜಪಾನನ್ನು ವಿರೋಧಿಸಿ ಎಂದು ರಷ್ಯ ಹೇಳಿತೆ ?” ಎಂದಳು.

ಬಸಂತರು ಚಕಿತರಾದರು ; ಮಾವ ಅವಾಕ್ಕಾದರು.

ಸ್ಫೈರಣೆ ತಂದುಕೊಂಡು ಮೈದುನ, “ ಸರಕಾರ ಹಣ ಕೊಟ್ಟಿರ ಬಹುದು ” ಎಂದು ಪಕ್ಕಕ್ಕೆ ತಿರುಗಿದರು.

ಅನುಪಮಳ ಕಂಠ ಬಿಗಿದು ಬಂತು........ಏನನ್ನೋ ಹೇಳಲೆಂದು ನಾಲಿಗೆ ತಡವರಿಸಿತು... ...ಆದರೆ ಮಾತು ಹೊರಬೀಳಲಿಲ್ಲ. ಹಿಂದಿನ ರಾತ್ರೆಯಷ್ಟೆ “ ನಾಲ್ಕು ಸಾವಿರವಾದರೂ ನಮ್ಮಿಬ್ಬರ ವಂತಿಗೆಯಾಗ ಬೇಕು ” ಎಂದಿದ್ದ ನಿಖಿಲ. “ ಮಾವನಿಗೆ ತಿಳಿಯದಂತೆ ತಂದೆಯ ಆಸ್ತಿ ಯಲ್ಲೊಂದಂಶ ಮಾರೋಣವೆ ?” ಎಂದು ಅನು ಸೂಚಿಸಿದ್ದಳು.

ಸರಕಾರ ಹಣ ಕೊಡುವುದಂತೆ! “ಇಲ್ಲ! ಅದಿರಲಾರದು !” ಎಂದಷ್ಟೆ ಅನು ಬಸಂತರಿಗೆ ಮರುನುಡಿದಳು.

ದೊಡ್ಡ ಬಾಬುಗಳು ಅನುಪಮೆಯನ್ನು ನೋಡಿ, “ ಯಾವಾಗ ಬಂದಿದ್ದ ಈ ಕಡೆ ? ” ಎಂದರು.

“ ಸ್ವಲ್ಪ ಸಮಯವಾಯಿತು ”

“ ಹೊರಗೆ ಬರುತ್ತಾನಂತೆಯೊ ? ”

“ ಇಲ್ಲ. ಅವರಮೇಲೆ ಕೈದು ವಾರಂಟಿದೆ ”

○ ○ ○ ○ ○ ○

೧೯೪೨ರ ಆಗಸ್ಟು. ದೇಶದ ಮುಖಂಡರ ಬಂಧನ. ಅಸದೃಶ ವಾದ ರೋಷ ಪ್ರದರ್ಶನ; ಕೋಲಾಹಲ ; ಗೊಂದಲ. ಊರಿಂದ ಊರಿಗೆ ದೇಶದಾದ್ಯಂತ ಹಬ್ಬಿದ ಮಹಾ ಉರಿ. ಕಶಾರಿಗೂ ಬಂದಿತು ; ದೊಡ್ಡ ಬಾಬುಗಳಿಗೂ ತಟ್ಟಿತು.

ಬಸಂತರೆಂದರು, “ ಅಪ್ಪಾ ನನ್ನನ್ನು ಬೀಳ್ಕೊಡಿ ! ”

ಅರೇ ಇದೆಲ್ಲಿಯ ತಮಾಷೆ? ತಮಾಷೆಯಲ್ಲ ರುದ್ರ ನಾಟಕ! ಹೃದಯದ ಹೊಯ್ದಾಟಕ್ಕೆ, ಅಶಾಂತಿಗೆ, ಅತೃಪ್ತಿಗೆ ಒಳ್ಳೆಯ ಹಾದಿಯಾಗಿತ್ತು. ಬಸಂತರು ಗುಪ್ತ ಕಾರ್ಯದಲ್ಲಿ ಕೈ ಇಕ್ಕುವರು.

ದೊಡ್ಡ ಬಾಬುಗಳು ನಂಬಲಿಲ್ಲ. ಎಷ್ಟು ಶಾಂತವಾಗಿ, ಸಭ್ಯನಾಗಿ ಇರುತ್ತಿದ್ದ. ಅನುಪಮೆಗೆ ನಿಜಕ್ಕೂ ಇದು ತಮಾಷೆ ಎನಿಸಿತು. ಬಸಂತರ ಪತ್ನಿಗೆ ಪ್ರಾಣ ಸಂಕಟವಾಯಿತು. ಎರಡು ಮಕ್ಕಳ ತಾಯಿ, ಸಾಲದುದಕ್ಕೆ ನಾಲ್ಕು ತಿಂಗಳ ಬಸುರಿ. ಏನು ಅನುಪಮೆಯು ಹಾಗೆ ಹುಡುಗಿಯೆ?

" ಬಸೂ, ನಿನ್ನ ತಲೆ ಪೂರ್ಣ ಕೆಟ್ಟಿತೆ?"

" ಇಲ್ಲ, ನಿರ್ಧರಿಸಿದ್ದೇನೆ. ಹೋಗಬೇಕು"

ಬಸಂತರು ಹೊರಟು ಹೋದರು; ಕೆಲವು ಸಾವಿರಗಳೊಡನೆ. ವಿಧಿ ಬರೆದಂತೆ ಆಗಲೇಬೇಕು–ಎಂದರು ದೊಡ್ಡ ಬಾಬು. ಅನು ನಕ್ಕಳು. ಅಕ್ಕನನ್ನು ನೋಡಿದಾಗ ಆಕೆಗೆ ಏಕೋ ಸಂತೋಷವಾಗುತಿತ್ತು. ಮಕ್ಕಳೊಡನೆ ಆ ಹೆಂಗಸು ಮಾವನ ಮನೆಗೆ ಹೊರಟು ಬಂದಳು.

ಎರಡು ಬಾರಿ ಪೋಲೀಸರು ಬಂದು ಹೋದರು. ದೊಡ್ಡ ಬಾಬು ಎಲ್ಲರ ಮೇಲೆಯೂ ಉರಿದು ಬೀಳುವವರೇ.

ಒಂದು ದಿನ ಬಸಂತರ ಹೆಂಡತಿ ಹೇಳಿದಳು: " ಅನೂ, ನಮ್ಮಿಬ್ಬರ ವಿಧಿಯೂ ಒಂದೇ"

" ಅಲ್ಲ—!"

" ಏನು? ನಮ್ಮವರಿಬ್ಬರೂ ಅಡಗಿದ್ದಾರಲ್ಲವೆ?"

" ಮೈದುನ ಹೇಳುವುದೊಂದು-ಜಪಾನು ಬಂದರೂ ಬರಲಿ, ಎಂತ. ನಿಖಿಲ ಹೇಳುವುದು ನಮ್ಮ ಗಡಿಯಾಚೆ ಇರುವ ಜಪಾನಿಯರನ್ನು ಹೊಡೆದೋಡಿಸಬೇಕು ಎಂತ"

ಎಲ್ಲವೂ ಅರ್ಥವಾದವರಂತೆ ಆಕೆ, " ಓಹೋ-ಹಾಗೆಯೇ?........ ನಿಖಿಲ ಹಾಗಾದರೆ ನಮ್ಮವರಿಗೆ ಇದಿರು ಅಲ್ಲವೆ?" ಎಂದು ನುಡಿದಳು.

ಅಯ್ಯನ್ನೆ !

ಅನುಪಮೆಗೆ ದುಃಖವಾಯಿತು. "ಹಾಗಲ್ಲ ಅಕ್ಕ, ನಿನಗೆ ಗೊತ್ತಾಗುವುದಿಲ್ಲ......."

ಅಕ್ಕ ಮಾತನಾಡಲಿಲ್ಲ. "ಹೌದೇ........ಇನ್ನೂ ನೀನು ಗಂಡನನ್ನು ಅವನು ಇವನು ಎಂದೇ ಕರೆಯುವುದೆ?" ಎಂದರು ಸ್ವಲ್ಪ ತಡೆದು.

ನಗಬೇಕೆನಿಸಿತು ಅನುವಿಗೆ. ಆದರೆ ಹೊಟ್ಟೆಯಲ್ಲಿ ಮಗುವನ್ನು ಹೊತ್ತಿದ್ದ ಆ ತಾಯಿಯನ್ನು ಹುಡುಗಿ ನೋಯಿಸಲಿಲ್ಲ.......

—೨೫; ೩೦; ೩೨; ೩೫;—ಠಣ್, ಠಣ್, ಠಣ್, ನೂರರ ಮೇಲೆ ನೂರು; ಸಾವಿರದ ಮೇಲೆ ಸಾವಿರ; ಹೀಗೆಯೇ ಲಕ್ಷ. ಬೇರೆ ಯಾವುದರ ಕಡೆಗೂ ದೊಡ್ಡ ಬಾಬುಗಳ ಲಕ್ಷ್ಯವಿರಲಿಲ್ಲ. ಅರವತ್ತು ದಾಟಿತು. ಆದರೂ ದರ್ಪ, ವ್ಯವಹಾರ, ಕೌಟಿಲ್ಯ- ಸ್ವಲ್ಪವೂ ಕಡಿಮೆ ಯಾಗಲಿಲ್ಲ. ತಮ್ಮ ಜೀವನದ ಎಷ್ಟು ಅಪೂರ್ಣ ಆಸೆಗಳಿದ್ದುವೋ ಅವೆಲ್ಲ ವನ್ನೂ ಹಣ ಶೇಖರಿಸುವುದರ ಮೂಲಕ ಅವರು ಈಡೇರಿಸುವಂತಿತ್ತು. ದವಸ ಧಾನ್ಯಗಳ ಬೆಲೆಯ ನಿಯಂತ್ರಣವಂತೆ! ಜನ ಹಿತದ ದೃಷ್ಟಿ ಯಿಂದ ಅದು ಅನವಶ್ಯ-ಎಂದರು ಬಾಬುಜಿ, ಅಕ್ಕಿ–ಬತ್ತವನ್ನು ಸರಕಾರ ಕೊಂಡುಕೊಳ್ಳುವುದಂತೆ! "ಮತ್ತೇನೆಲ್ಲ ಮಾಡಲಿಕ್ಕಿದೆ?"—ಎಂದು ಅವರೇ ನಗೆಯಾಡಿದರು. ಮಕ್ಕಳ ಯೋಚನೆಯಿಲ್ಲ. ಸೊಸೆಯಂದಿರು ಮನೆಯಲ್ಲೇ. ತಾಯಿಯನ್ನು ಅಲ್ಲೇ ಇರಿಸಿಕೋ ಎಂತ ಹಿರಿಯ ಮಗ ನಿಗೆ ಬರೆದಾಗಿತ್ತು.

ನಿಖಿಲ ಬಂದಿದ್ದನೆಂದು ತಿಳಿದಾಗ, ಅತ್ತಿಗೆ ಕೇಳುವಳು "ನಮ್ಮ ವರ ಸಮಾಚಾರವಿದೆಯೇ?" ಎಂದು, ಅನುಪಮೆಯೊಡನೆ. "ಚೆನ್ನಾ ಗಿದ್ದಾರಂತೆ" ಎಂದು ಅನು ಸುಳ್ಳಾಡುವಳು....ಮತ್ತೇನೆಂದು ಉತ್ತರ ವೀಯಬೇಕು ಆ ಮುಗ್ಧೆಗೆ....? ಹೀಗೆ ಸುಳ್ಳಾಡಿದುದು ಎರಡೇ ಸಲ. ಐದೇ ತಿಂಗಳಲ್ಲಿ ಬಸಂತರು ಬಂಧಿಸಲ್ಪಟ್ಟರು; ಸ್ಥಾನಬದ್ಧತೆ. ಕಲ್ಕ ತ್ತೆಯ 'ಆನಂದಬಜಾರ' ಪತ್ರಿಕೆಯಲ್ಲಿ ದಪ್ಪ ಅಕ್ಷರದಲ್ಲಿ ಆ ವಾರ್ತೆ ಬಂತು.

ದೊಡ್ಡ ಬಾಬು ಯತ್ನಿಸಿ ನೋಡಿದರು: ಜಾಮೀನಿನ ಮೇಲೆ ಬಿಡುಗಡೆ ಸಾಧ್ಯವೋ ಏನೆಂದು. ಹಿಂದಿನ ಹಾಗಿರಲಿಲ್ಲ ಸರಕಾರ.

ಅದಾದ ಸ್ವಲ್ಪ ದಿನಗಳಲ್ಲಿ ಬಸಂತರ ಪತ್ನಿ ಒಂದು ಹೆಣ್ಣು ಕೂಸಿಗೆ ಜನ್ಮ ಕೊಟ್ಟಳು. ಅನು "ಇದು ನನ್ನ ಮಗು" ಎಂದಳು.

ಗಂಡನಿಲ್ಲದಾಗ ಅತ್ತಿಗೆಯ ಪ್ರಸವ. ಮೂರು ವರ್ಷಗಳಿಂದ ತನ್ನ ನಿಖಿಲನಿಲ್ಲ. ಎಲ್ಲಿಯಾದರೂ ತಾನು ಹೆತ್ತುದಾದರೆ? ಪುನಃ ಸುಂದರ ಕಲ್ಪನೆ; ದುಃಖದ ಯಾತನೆ. ಅನು ಅದನ್ನು ಮರೆತುಬಿಡುವಳು. ತನಗೆ ಕೆಲಸವಿದೆ. ಊರ ಮಹಿಳೆಯರನ್ನು ಒಂದುಗೂಡಿಸುವುದಕ್ಕೆ ಯತ್ನಿಸಬೇಕಲ್ಲವೆ? ನಿಖಿಲ ಅದನ್ನು ಸೂಚಿಸಿದ್ದ.

ಮುಂದಿನ ತಿಂಗಳಲ್ಲಿ ನಿಖಿಲಬಂದಾಗ, "ನಿಮ್ಮನ್ನು ಏಕೆ ಪೋಲೀಸರು ಹಿಡಿಯುವುದಿಲ್ಲ?" ಎಂದಳು ಅನುಪಮ.

"ಬೇಟೆ ನಿಂತಿದೆ. ಆದರೆ ಸಿಕ್ಕಿದರೆ ಬಿಡಲಾರರು........"

ವಾರಂಟನ್ನು ಹಿಂತೆಗೆಸುವ ಯತ್ನವಾಗಿತ್ತು; ಆದರೆ ಸರಕಾರ ಒಪ್ಪಿರಲಿಲ್ಲ. ಮಾಡಬೇಕಾದ ಕೆಲಸವನ್ನು ಇತರ ಕಾಮ್ರೇಡರು ಪ್ರಕಾಶವಾಗಿಯೇ ಸಾಗಿಸುತ್ತಿದ್ದರಾದರೂ ತಾನು ಅಡಗಿರಬೇಕು!

ಕೈದು ವಾರಂಟು ಇದ್ದು ಅಡಗಿದ್ದವರು ಅಸ್ಸಾಮಿನಲ್ಲಿ ಇಬ್ಬರೇ. "ಆದರೆ ಇನ್ನೂ ಎಷ್ಟೋ ಮಂದಿ ಕಮ್ಯೂನಿಸ್ಟರು, ಫಾಸಿಸ್ಟ್ ವಿರೋಧಿಗಳು, ದೇಶಭಕ್ತರು ಸೆರೆಯಲ್ಲಿರುವರು" ಎಂದಿದ್ದ ನಿಖಿಲ ಆ ದಿನ.

....ಅವನು ಹೊರಟಾಗ, "ಅತ್ತಿಗೆಯ ಮಗುವನ್ನು ನೋಡುತ್ತೀಯಾ?" ಎಂದಳು ಅನು.

ನಿಖಿಲ ಉತ್ತರವಿತ್ತ "ಏನು? ಭೂರ್ಶ್ವ ಹೃದಯವಿಕಾರವೆ?" ಎಂದು. ಮೊದಲೇ ಕೆದರಿದ್ದ ನಿಖಿಲನ ಕ್ರಾಪನ್ನು ಮತ್ತಷ್ಟು ಹಿಡಿದೆಳೆದು ನೋಯಿಸಿ "ಅಯ್ಯೋ!" ಎಂದು ಕೂಗಿಸಿದಳು ಅನು.

........ದೊಡ್ಡ ಬಾಬುಗಳು ಹಿರಿಯ ಸೊಸೆಯನ್ನೂ ಮಗುವನ್ನೂ ಕರೆದುಕೊಂಡು ಪಟ್ಟಣಕ್ಕೆ ಹೋಗಿ ಬಸಂತರಿಗೆ ತೋರಿಸಿ ಬಂದರು. ನಿಸ್ತೇಜವಾಗಿತ್ತು ಬಸಂತರ ಮುಖ....

ಅನುದಿನವೂ ವಾರ್ತೆ ಬರತೊಡಗಿತು........ಜನ ಬಂಗಾಳದಲ್ಲಿ ನಿಂತಲ್ಲೆ, ಕುಳಿತಲ್ಲೆ ಮಡಿಯುತ್ತಿದ್ದಾರೆ ! "ನಿಜವಿರಬಹುದೆ ?" ಎಂದರು ಅತ್ತಿಗೆ.

"ನಿಜ ! ನಿಜ !........ಅದಕ್ಕೆ ಕಾರಣರು ಜನರೇ ಎಂಬುದೂ ನಿಜ."

"ಜನರು ?"

"ಹೌದು ........ಜನರೆಂದಲ್ಲ ಪಶುಗಳು ಎಂದು ಕರೆದರೆ ಸರಿ.... ಮನುಷ್ಯರ ಎಲುಬುಗೂಡುಗಳನ್ನು ಎಣಿಕೆ ಹಾಕಿ, ಚಿನ್ನದ ಗಟ್ಟಿಗಳನ್ನು ಕೊಂಡುಕೊಳ್ಳುವವರು........ಅಕ್ಕಿಯನ್ನು ಅಡಗಿಸಿಟ್ಟು ಜನರ ಪ್ರಾಣ ವನ್ನು ಹಿಂಡುವವರು."

"ನೀನು ಅಬದ್ಧ ಮಾತನಾಡುತ್ತೀ" ಎಂದರು ಅತ್ತಿಗೆ.

ತಾನು ಸಂಘಟಿಸುತ್ತಿದ್ದ, ಮಾವನಿಗೆ ಅವಿಧೇಯಳಾಗಿ ಸಂಘಟಿ ಸುತ್ತಿದ್ದ, ಆ ಮಹಿಳೆಯರ ಆತ್ಮರಕ್ಷಾಸಮಿತಿಯಲ್ಲಿ ಅಷ್ಟು ಕಟುವಾಗಿ ಮಾತನಾಡಬಹುದು ; ಮಾವನ ಮುಂದೆ ಎಲ್ಲಿ ಸಾಧ್ಯ ?

ದೊಡ್ಡ ಬಾಬುಗಳು ಕಲ್ಕತ್ತೆಗೆ ಓಡಾಡುವುದರಲ್ಲೆ ತಲ್ಲೀನರು. ಹಿಂದೆ ಬಂದಾಗ, ಕಲ್ಕತ್ತೆಯ ಮೇಲೆ ಜಪಾನಿ ವಿಮಾನಗಳ ಧಾಳಿ ಹೇಗಾಯಿತೆಂಬುದನ್ನು ಸಾವಿರ ಕತೆಗಳೊಡನೆ ಅವರು ಬಣ್ಣಿಸುತ್ತಿ ದ್ದರು. ಆದರೆ, ಮಣಕ್ಕೆ ನಾಲ್ವತ್ತೈದರಂತೆ ಅಸ್ಸಾಮಿನಿಂದ ತಮ್ಮ ಅಕ್ಕಿಯನ್ನು ಬಂಗಾಳಕ್ಕೊಯ್ದು ಮಾರಲು ಏನು ವ್ಯವಸ್ಥೆ ಮಾಡಿದ ರೆಂಬುದನ್ನು ಅವರು ತಿಳಿಸಿದುದಿಲ್ಲ.

"ಜನರಿಗಾಗಿ ಹೆಚ್ಚು ಬೆಳೆಸುವೆವು" ಎಂದರು ಕಿಸಾನ ಸಭೆಯ ವರು. ಮೊದಲು ಕ್ರುದ್ಧರಾದ ಬಾಬುಗಳು ಮತ್ತೆ ನಕ್ಕು "ಹೂಂ. ಯಾರು ಬೇಡವೆನ್ನುವವರು ?" ಎಂದು ಉತ್ತರವಿತ್ತರು.

ಬಂಗಾಳದ ಆರ್ಥಿಕ ನೆಲೆಗಟ್ಟು ಪೂರ್ಣ ಬುಡಮೇಲಾಯಿತು. ಶ್ರಮಜೀವಿಗಳ ಮನೆಗಳು ನೆಲಸಮವಾದುವು. ಕೆಳಗಣ ಮಧ್ಯಮ ವರ್ಗದದರ ಕುಟುಂಬಗಳು ಛಿದ್ರವಾದುವು. ಒಡೆದುಹೋದುವು. ಕೃಷಿಕ ಸಂತಾನ ಹಿಡಿಕೂಳಿಗಾಗಿ ತಮ್ಮ ಹೊಲಗಳನ್ನು ಬಿಟ್ಟು ಅಂಡಲೆಯಿತು. ಲಕ್ಷಗಟ್ಟಲೆಯಲ್ಲಿ ಮಂದಿ ಮಡಿದರು. ಒಂದು ವರ್ಷ ರುದ್ರ ನೃತ್ಯ............

ಅಸ್ಸಾಮಿನ ಸರಕಾರದಿಂದ ಎರಡು ಸಲ ಬಾಬುಗಳಿಗೆ ಎಚ್ಚರಿಕೆ ಬಂತು—ಅಕ್ಕಿಯನ್ನು ಬಂಗಾಳಕ್ಕೆ ಒಯ್ಯಬಾರದು ಎಂದು. ಸರಕಾರ ವನ್ನು ಶಪಿಸುತ್ತ ಬಾಬುಗಳು ಸ್ವಲ್ಪ ಅಕ್ಕಿಯನ್ನು ಅಧಿಕಾರಿಗಳಿಗೆ ಮಾರಿದರು........ಹೆಚ್ಚು ಅಕ್ಕಿ ಕತ್ತಲೆಯಲ್ಲಿ ಕಳ್ಳಸಂತೆಯ ಹಾದಿ ಹಿಡಿಯಿತು.

ಬಾಬುಗಳ ಪ್ರಾಂತದಲ್ಲೂ ಹಿಡಿಕೂಳು ಚಿನ್ನವಾಯಿತು. ಹಳ್ಳಿಯ ಕೂಲಿಗಳಿಗೆ—ಶ್ರಮಜೀವಿಗಳಿಗೆ—ಬಾಬುಜಿ ಹಣ ಕಾಸು ಕೊಡತೊಡ ಗಿದರು. ಮರುದಿನ ಪುನಃ ಅವರ ಮನೆಗೇ ಬಂದು, ಸೇರಿಗೆ ಒಂದೂ ವರೆ ರೂಪಾಯಿಕೊಟ್ಟು ಬಡವರು ಅಕ್ಕಿ ಕೊಂಡುಕೊಳ್ಳಬೇಕು........!

ಹಿರಿಯ ಸೊಸೆ ಮನೆಗೆ ಬಂದ ಮೇಲೆ ಅನುಪಮೆಯ ಬಗ್ಗೆ ಮಾವ ನಿಗೆ ಮಮತೆ ಇಲ್ಲ. ಯಾರ ಮೇಲೆಯೂ ಇರಲಿಲ್ಲ. ದಿನ ಹೋದಂತೆ ಕಿರಿಯ ಸೊಸೆ ಹೆಚ್ಚು ಹೆಚ್ಚಾಗಿ ಮಾವನನ್ನು ದ್ವೇಷಿಸಿದಳು.

ಯಾವಾಗಲಾದರೊಮ್ಮೆ ಬಂದಾಗ ನಿಖಿಲ ತಂದೆಯನ್ನು ಹೀನೈಸಿ ಮಾತಾಡುತ್ತಲೇ ಇದ್ದ.

ಒಂದು ವರ್ಷದ ಸ್ಥಾನಬದ್ಧತೆಯ ಮೇಲೆ ನಿಖಿಲನ ಅಣ್ಣನನ್ನು ಸರಕಾರ ಬಿಟ್ಟಿತು. ಅಕ್ಕ ಪುನಃ ತನ್ನ ಮನೆಗೆ ಹೋದಳು. "ಒಬ್ಬಳು ಮಗಳನ್ನು ತಂದಿದ್ದೇನೆ ಕಾಣಿಕೆಯಾಗಿ" ಎಂದಳು ಬಸಂತ ರೊಡನೆ.

ಅವರ ಬಲು ಇಳಿದು ಹೋಗಿದ್ದರು. ೧೯೪೨ ಆಗಸ್ಟಿನ ಅನಂತರ ದೇಶದಲ್ಲಾದ ದುರ್ಘಟನೆ, ಬಂಗಾಳದ ದುರಂತ, ದೂರದ ಕೇರಳ—

ಎಲ್ಲವೂ ಬಸಂತರ ಪರಸ್ಪರ ವಿರುದ್ಧ ವಿಚಾರಸರಣಿಯನ್ನೇ ನಿಲ್ಲಿಸಿದ್ದುವು. ಅವರಲ್ಲಿ ಸಂತಾಪವನ್ನೂ ದುಃಖವನ್ನೂ ಉಂಟುಮಾಡಿದ್ದುವು.

ಮಾರ್ಚ್ ತಿಂಗಳು. ಜಪಾನಿನ ಸಮುರದೆವ್ವ ನರ್ತಿಸುತ್ತ ಮಣಿಪುರದೊಳಕ್ಕೆ ನುಗ್ಗಿತು. ಭಾರತೀಯರ ಮನೆ ಮಠಗಳ ಮೇಲೆ ಮೊದಲ ಬಾರಿಗೆ ಜಪಾನರು ಕೈ ಮಾಡಿದರು. ಮೊದಲು ಮಣಿಪುರ, ಮತ್ತೆ ಅಸ್ಸಾಮು, ಬಳಿಕ ಬಂಗಾಲ ! ಹೀಗೆ ಸಾಗಬೇಕು ಅವರ ಜೈತ್ರ ಯಾತ್ರೆ. "ಬಿಡಲೊಲ್ಲೆವು !" ಎಂದುವು ಹಿಂದೀಯರ, ಚೀನಿಯರ, ಅಮೆರಿಕನರ, ಬ್ರಿಟಿಷರ ಪಡೆಗಳು. "ಬಿಡಲಾರೆವು" ಎಂದಿತು ಎಚ್ಚತ್ತ ಜನತೆ.

"ಬ್ರಿಟಿಷ್ ಸರಕಾರ ನಮ್ಮ ಕೈಗಳನ್ನು ಬಂಧಿಸಿದ್ದರೆ ಕಾಲುಗಳಿಂದ ಜಪಾನರನ್ನು ಒದೆಯೋಣ" ಎಂದು ಬಸಂತಕುಮಾರರಂಥವರು ಪತ್ರಿಕೆಗಳಿಗೆ ಪ್ರಸ್ತಾವನೆ ಕೊಟ್ಟರು.

ನಿಖಿಲ ಅನುಪಮಳ ಮೂಲಕ ಅಣ್ಣನಿಗೆ ಹೇಳಿ ಕಳುಹಿದ: "ಕಳೆದ ಬೆಳೆಯ ೨೦,೦೦೦ ಮಣ ಅಕ್ಕಿಯನ್ನು ಏನುಮಾಡುವಿರಿ ?"

"ಅಪ್ಪಾ ಅಕ್ಕಿ ಎಲ್ಲಿ ?" ಎಂದು ಬಸಂತ ಕೇಳದಿರಲಿಲ್ಲ.

"ಮನೆಯ ಕಡೆ ಯೋಚನೆ ಹರಿಯಿತೆ ಈಗ ?" ಎಂದು ತಂದೆ ಕಟೂಕ್ತಿಯಾಡಿದರು.

ನಾಲ್ಕು ವಾರಗಳ ಅನುಕ್ರಮ ಮುನ್ನಡೆ. ಜಪಾನೀ ಸೇನೆ ಎಲ್ಲಿನ ತನಕ ಬರುವುದು ? ಕೋಹಿಮಾ, ಇಂಫಾಲ,-ಮಣಿಪುರದ ಪತನವಾಗುವುದೆ ? ಅಸ್ಸಾಮನ್ನು ಜಪಾನರು ಪ್ರವೇಶಿಸುವರೆ ? ಕಾಶಾರನ್ನು ಹಿಡಿಯುವರೆ ?

ಬಾಬುಜಿ ಯೋಚಿಸುತ್ತಿದ್ದರು. ಮಣಕ್ಕೆ ೬೦ ರೂ. ಗಳಂತೆ ಈಗ ಮಾರಬೇಕೆ ಬೇಡವೆ ? ಜಪಾನರು ನೂರು ರೂ. ಕೊಟ್ಟು ಕೊಂಡುಕೊಳ್ಳುವರೋ ಇಲ್ಲವೊ ?

ಈಗಲೀಗ ನಿಖಿಲ ಅನುಪಮೆಯನ್ನು ಕಾಣಲು ಬರುವುದು ಕಡಿಮೆಯಾಯಿತು. ಅವನಿಗೆ ಬಿಡುವಿಲ್ಲ. ಗರಿಲಾ ಶಿಕ್ಷಣ ಕೇಂದ್ರಗಳೆಡೆಯಲ್ಲಿ ಓಡಾಡಬೇಕು.

ಸ್ವಲ್ಪ ದಿನಗಳಿಂದ ಬಾಬುಜಿ ಮನೆಗೆ ಬರುತ್ತಲೇ ಇರಲಿಲ್ಲ. ಒಮ್ಮೆ ಮಾತ್ರ ರಾತ್ರೆ ಬಂದು ಕರಣೀಕರಿಗೆ ಅನುಜ್ಞೆಗಳನ್ನು ಕೊಟ್ಟು ಹೋಗಿದ್ದರು. "ಸರಕಾರ ವಾರಂಟು ಹೊರಡಿಸಿರಬೇಕು" ಎಂದರು ಬಸಂತ ಕುಮಾರರು.

ಅನುಪಮೆಗೆ ದುಃಖವಾಗಲಿಲ್ಲ.........

—ಬೀಳ್ಕೊಡುವುದಕ್ಕೆ ನಿಖಿಲ ಬಂದಿದ್ದ. ಬೀಳ್ಕೊಡುವುದು? ಹೌದು ಅನೂ—ವೀಳೆಯ ಕೊಡು; ರಣರಂಗಕ್ಕೆ ಹೋಗಬೇಕು........

ನಿಖಿಲನ ನಾಯಕತ್ವದಲ್ಲಿ ಹತ್ತು ಮಂದಿಯ ಗರಿಲಾ ಪಡೆ ಮಣಿಪುರಕ್ಕೆ ಹೊರಟಿತ್ತು. ವೈರಿದಳಗಳ ಎಡೆಯಿಂದ ನುಸುಳಿ ಒಳ ಹೋಗುವುದು ಅವರ ಉದ್ದೇಶ. ಜಪಾನರಿಗೆ ಅಪಜಯವಾಗುವಂತೆ ಯತ್ನಿಸುವುದು; ಅದಾಗದಿದ್ದರೆ ಮತ್ತೆ ಅವರಿಗೆ ತೊಂದರೆ ಕೊಡುವುದು.

ಬಿಗಿಮುಷ್ಟಿಯಿಂದ ವಂದಿಸಿ ಅನು ನಿಖಿಲನನ್ನು ಬೀಳ್ಕೊಟ್ಟಳು.

........ಮರುದಿನದ ಪತ್ರಿಕೆಯಲ್ಲಿ "ಕಾಶಾರಿನ ಒಬ್ಬ ಪ್ರಸಿದ್ಧ ಜಮೀನ್ದಾರರು ಅಕ್ಕಿ ಅಡಗಿಸಿದ ಆರೋಪದ ಮೇಲೆ ಬಂಧಿಸಲಟ್ಟಿದ್ದಾರೆ" ಎಂದಿತ್ತು. ಮನ ನೋಯಿಸಬಾರದೆಂದು ಆ ರಾಷ್ಟ್ರೀಯ ಪತ್ರಿಕೆಯವರು ಜಮೀನ್ದಾರರ ಹೆಸರು ಕೊಟ್ಟಿರಲಿಲ್ಲ. "ತಂದೆಯೇ ಇರಬೇಕು" ಎಂದರು ಬಸಂತರು.

ದೂರದ ಸಂಯುಕ್ತ ಪ್ರಾಂತದ ಹಿರಿಯಣ್ಣನಿಂದ ತಂತಿ ಬಂತು. "ತಂದೆ ಎಲ್ಲಿದ್ದಾರೆ?"—ಅದಕ್ಕೆ ಉತ್ತರ ಹೋದ ಮೇಲೆ, "ಜಾಮೀನಿನಲ್ಲಿ ಬಿಡಿಸಲು ನೋಡು—ನಾನು ಪ್ರಯತ್ನಿಸುವೆ" ಎಂದು ಇನ್ನೊಂದು ತಂತಿ ಬಂತು. ಬಸಂತರು ಉತ್ತರ ಕೊಡಲಿಲ್ಲ.

ಮೂರನೆ ದಿನ ರಾತ್ರೆ ಕಾಶಾರಿನ ಪಾರ್ಟಿ ಆಫೀಸಿನಿಂದ ಅನುಪಮೆಗೆ ಸುದ್ದಿ ಬಂತು. ನಿಶ್ಶಸ್ತ್ರ ಗರಿಲಾ ಪಡೆಯೊಡನೆ ಮುಂದೆ ಸಾಗುತ್ತಿದ್ದ ನಿಖಿಲನನ್ನು ಅಸ್ಸಾಮಿನ ಪೋಲೀಸರು ಮಣಿಪುರದ ಅಧಿಕಾರಿಗಳ ಸಹಾಯದಿಂದ ಬಂಧಿಸಿದರು, ಎರಡೂವರೆ ವರ್ಷ ಹಿಂದಿನ ಕೈದು ವಾರಂಟನ್ನು ಉಪಯೋಗಿಸಿ!

ಅಯ್ಯನ್ನೆ!

ಅನುಪಮೆಗೆ ವ್ಯಸನವಾಯಿತು. ನಿಖಿಲನ ಕಾರ್ಯಕ್ಕೆ ಹೀಗೆ ತಡೆ ಬರಬೇಕೆ?

"ಕಾರಾಗೃಹಕ್ಕೆ ಹೋಗಿ ನೋಡುವೆ. ಬಿಡುಗಡೆ ಸಾಧ್ಯವಾಗಬಹುದು" ಎಂದರು ಬಸಂತಬಾಬು.

ಅನುಪಮೆಯ ಹೃದಯ ತುಂಬಿ ಬಂತು. "ನಾನೂ ಬರುವೆ" ಎಂದಳು.

○ ○ ○ ○ ○ ○

ಮುಂಜಾನೆ ಬೇಗನೆದ್ದು ಅನು, ಮನೆಯ ಕೆಲಸದವಳನ್ನೆಬ್ಬಿಸಿ, ಅವಳ ಸಹಾಯದಿಂದ ಸ್ನಾನ ಮಾಡಿದಳು. ಸೀರೆಯುಟ್ಟುಕೊಂಡಳು. ಗಾಳಿ ಶೀತಲವಾಗಿ ಬೀಸಿತು. ಹೃದಯ ಏಕೋ ಡವಡವನೆ ಹೊಡೆದು ಕೊಳ್ಳುತ್ತಿತ್ತು.

ಬಲು ಎತ್ತರದಲ್ಲಿ ವಿಮಾನಗಳು ಹಾರಾಡುವ ಸದ್ದು ಕೇಳುತ್ತಿತ್ತು.

ಕಾರಾಗೃಹದಲ್ಲಿ ತಾನು ನಿಖಿಲನ ಸಹೋದ್ಯೋಗಿಗಳನ್ನು ಕಾಣುವಳು. "ಕಾಮ್ರೇಡ್!" ಎಂದು ಅವರು ಸಂಬೋಧಿಸುವರು. "ಇವರು ಗರಿಲಾ ನಾಯಕ ನಿಖಿಲನ ಪತ್ನಿ" ಎನ್ನುವರು. "ಇವರ ಮಾವ ಮೊನ್ನೆ ಬಂಧಿಸಲ್ಪಟ್ಟ ಜಮೀನ್ದಾರರು" ಎಂದು ನಗೆಯಾಡುವರು. ಬಸಂತ ಕುಮಾರರ ಪರಿಚಯವನ್ನು ಇತರರಿಗೆ ಮಾಡಿಸಿ ಕೊಡುವರು.

........ಕುದುರೆ ಗಾಡಿಯನ್ನೇರಿಕೊಂಡು ಬಸಂತರು ಬಂದು ಅನುಪಮೆಯನ್ನು ಕರೆದರು. ಗಾಡಿ ಹೊರಟಿತು. ಪೋಲೀಸರ ವಶವಿರುವವನು ತನ್ನ ಹೆಮ್ಮೆಯ ಜೀವನ ಸಂಗಾತಿ; ಬಳಿಯಲ್ಲಿ ಕುಳಿತವನು ಉಚ್ಚ ರಾಷ್ಟ್ರಾಭಿಮಾನದ ಪ್ರತಿನಿಧಿ; ತಾನು ಹೊಸ ಜಗತ್ತಿನ, ಹೊಸ ಭಾರತದ, ಅದನ್ನು ನಿರ್ಮಿಸುತ್ತಿರುವ ನವಜನಾಂಗದ ಯುವತಿ.

ಹತ್ತಿರವಿದ್ದ ಜವಾನರು ತೃಣ ಸಮಾನರಂತೆ ಕಂಡರು.

ಸೆರೆಮನೆಯಲ್ಲಿದ್ದ ಮಾವನ ನೆನಪು ಒಮ್ಮೆಯೂ ಆಗಲಿಲ್ಲ.

ಕುದುರೆ ಓಡುತಿತ್ತು.



ಸೆಪ್ಟೆಂಬರ್, ೧೯೪೪



# ಅಯ್ಯನ್ಯೆ!

ಜಲಜ ನಗುತ್ತಾ ನಿಂತಿದ್ದಾಳೆ. ಕುಮಾರ ರಾಜೇಶ್ವರ ಹೊಲದ ನೇರಿ ಯುದ್ಧಕ್ಕೂ ಓಡಿಬರುತ್ತಿದ್ದಾನೆ. "ಬಂದೆಯಾ ಮಗು, ಬಾ ರಾಜೂ ........" ಎಂದು ಮಮತೆಯ ತಾಯಿ ಸಂತೋಷದ ಕಣ್ಣೀರನ್ನು ಎರಡು ಹನಿ ಹನಿಸುತ್ತಾ ತನಗೆ ಸ್ವಾಗತವೀಯುತ್ತಿದ್ದಾಳೆ. ಅಣ್ಣ ನಾರಾಯಣ ರಾಜು, ತಮ್ಮ ಕೃಷ್ಣರಾಜು, ತನ್ನನ್ನು ಅಪ್ಪಿಕೊಳ್ಳಲು ಮುಂದೆ ಬರುತ್ತಿದ್ದಾರೆ.

ಗೃಹಾಭಿಗಮನ; ಬದುಕಿ ಉಳಿದುಬಂದ ಬಂಧವಿಮುಕ್ತ ವೀರನಿಗೆ ಸಂಭ್ರಮದ ಸ್ವಾಗತ!

—ನಾಗಪುರದಿಂದ ಬೆಜವಾಡಕ್ಕೆ ಹೊರಟ ರೈಲುಬಂಡಿಯಲ್ಲಿ ಹಾಗೆ ಕನಸುಕಾಣುತ್ತಾ 'ಜಮೇದಾರ್' ವರದರಾಜು, ಸಿಗರೇಟಿನ ಹೊಗೆಯನ್ನು ಸುರುಳಿಸುರುಳಿಯಾಗಿ, ಓಡುತ್ತಿದ್ದ ಬಂಡಿಯ ಕಿಟಿಕಿಯೆಡೆಯಿಂದ ಹೊರ ಹಾಕಲು ವಿಫಲನಾಗಿ ಯತ್ನಿಸುತ್ತಿದ್ದ.

........ಜಮೇದಾರ್ ವರದರಾಜು? ಊಹೂಂ. ಈಗ ಅವನು ಜಮೇದಾರನಲ್ಲ; ಆಜಾದ್ ಹಿಂದ್ ಫೌಜಿನ ಒಬ್ಬ ಸಾಮಾನ್ಯ ಯೋಧ—ದಳಪತಿ. ಕಳೆದ ಐದು ವರ್ಷಗಳಲ್ಲಿ ಮಹಾಯುದ್ಧದ ಹೆಸರಲ್ಲಿ ಏನೋ ಏನೋ ಸಂಭವಿಸಿತ್ತು. ಪ್ರತಿಯೊಂದು ದೇಶದ, ಪ್ರತಿಯೊಂದು ಜನಾಂಗದ, ಪ್ರತಿಯೊಂದು ವ್ಯಕ್ತಿಯ ಜೀವನದಲ್ಲಿ ಒಂದಲ್ಲ ಒಂದು ರೀತಿಯ ಅಳಿಸಲಾಗದ ಗುರುತನ್ನು ಯುದ್ಧ ಉಳಿಸಿಹೋಗಿತ್ತು. ಆ ಯುದ್ಧದ ಅವಧಿಯಲ್ಲಿ ತಾನು ಮಾಡಿದುದನ್ನೆಲ್ಲ ಸ್ಮರಿಸಿಕೊಂಡಾಗ ವರದರಾಜುಗೆ ಹೆಮ್ಮೆ ಎನಿಸಿತು........ಒಂದಿಷ್ಟೂ ದುಃಖವಾಗಲಿಲ್ಲ.

ಅಯ್ಯನ್ನೈ !

ತನ್ನ ಮಿಲಿಟರಿ ಯೂನಿಫಾರ್ಮನ್ನು ವಿಚಾರಣೆಯ ಅನಂತರ ಬ್ರಿಟಿಷ್ ಅಧಿಕಾರಿಗಳು ಕಿತ್ತುಕೊಂಡಿದ್ದರು. ಅದನ್ನು ಉಟ್ಟುಕೊಳ್ಳಲು ಅವನಿಗೆ ಅಧಿಕಾರವಿಲ್ಲವಂತೆ. ಇಂಡಿಯನ್ ನ್ಯಾಷನಲ್ ಆರ್ಮಿಗೆ ಸೇರಿ ತನ್ನ ಹುಟ್ಟುನಾಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡಿದ್ದು ಅಪರಾಧವಂತೆ. ಅವನಂತೆಯೇ ಹಲವು ನೂರು ಜನ ಆಜಾದ್ ಹಿಂದ್ ಫೌಜಿನ ಯೋಧರ-ಅಧಿಕಾರಿಗಳ ವಿಚಾರಣೆಯಾಗಿತ್ತು. "ನಿಮ್ಮನ್ನು ಬಿಟ್ಟು ಬಿಡುತ್ತೇವೆ" ಎಂದರು ಮಿಲಿಟರಿ ನ್ಯಾಯಾಧೀಶರು. ಬ್ರಿಟಿಷ್ ಸತ್ಯನಿಷ್ಠೆ ಎಂದರೇನೆಂದು ಲೋಕಕ್ಕೆ ತೋರಿಸಲು, ಫೌಜಿನ ಕೆಲವೇ ಉಚ್ಚ ಅಧಿಕಾರಿಗಳ ವಿಚಾರಣೆ ಸಾಕಾಗಿತ್ತಂತೆ.

ಹುಟ್ಟು ಯೋಧ ವರದರಾಜು ಸಾವಿಗೆ ಎಂದೂ ಹೆದರಿದವನಲ್ಲ. ಅವನು ಹುಲಿ. ಆಪತ್ತನ್ನು "ಇಲ್ಲಿ ಬಾ" ಎಂದು ಕರೆದು, ಅದರ ಮೇಲೆ ಜಿಗಿದುಬೀಳುವ ಜಾತಿ. ೧೯೪೧ರಲ್ಲಿ ವರದರಾಜು ಸೇನೆ ಸೇರಿದ್ದು. ಆಗ ಅಣ್ಣ ಹೊಲ ನೆಲ ನೋಡುತ್ತಿದ್ದ....ತಮ್ಮ ಅವನಿಗೆ ನೆರವಾಗುತ್ತಿದ್ದ. ಮುಂದಿನ ವರ್ಷದ ಮೊದಲ ತಿಂಗಳೊಮ್ಮೆ ರಜೆಯ ಮೇಲೆ ವರದರಾಜು ಊರಿಗೆ ಬಂದಾಗ ತನ್ನಾಕೆ ಚೊಚ್ಚಲ ಕೂಸನ್ನು—ಗಂಡು ಮಗುವನ್ನು —"ಇಕೊಳ್ಳಿ ತಕೊಳ್ಳಿ" ಎನ್ನುತ್ತಾ ಹಿಡಿದು ನಿಂತಿದ್ದಳು. ತಮ್ಮನ ಮದುವೆಯೂ ಅವಸರವಸರವಾಗಿ ಆಗಲೇ ನಡೆಯಿತು. ಹೊಲದಲ್ಲಿ ಗೇಯಲು, ಮನೆಯಲ್ಲಿ ದುಡಿಯಲು, ಹೊಸತೊಬ್ಬಳು ಹುಡುಗಿ ಬಂದಳು. ........ಆಗ ಹಿಂದಿರುಗಿದ ರಾಜುವನ್ನು ಆಳುವವರು ಬರ್ಮಾಕ್ಕೆ ಸಾಗಿಸಿದರು.

ಅಲ್ಲಿಂದ ಆ ಮೇಲೆ....ಒಂದು ಕಾಗದವಿಲ್ಲ—ಒಂದು ಸುದ್ದಿ ಸಮಾಚಾರವಿಲ್ಲ.

ವರದರಾಜುವೇನೊ ಹುಲಿ ನಿಜ. ಆದರೆ ಬ್ರಿಟಿಷ್ ಶೋಷಕರ ಬಗ್ಗೆ ಬರ್ಮಿಯರಿಗಿದ್ದ ಮಹಾದ್ವೇಷ, ಬ್ರಿಟಿಷ್ ಸೇನಾನಿಗಳು ನಡೆಸಿದ ನೂರಾರು ಅಚಾತುರ್ಯಗಳು ಅನ್ಯಾಯಗಳು, ಮಿತ್ರಪಡೆಗೆ ಸೋಲನ್ನು ತಂದುವು. ಹಳೆಯ ಮರ್ದಕನ ಬದಲು ಹೊಸಬ ಬರ್ಮಕ್ಕೆ ಬಂದ.

ಹಿಂದೀಯ ಯೋಧರು ಸಾವಿರಗಟ್ಟಲೆಯಲ್ಲಿ ಅವನ ಕೈದಿಗಳಾದರು.

ಓದು ಕಲಿತ ಬುದ್ಧಿವಂತ ವರದರಾಜು. ಆದರೆ ಧ್ಯೆಯಗೀಯ ಯಾವುದರಿಂದಲೂ ಪ್ರೇರಿತನಾಗಿ ಅವನು ಸೇನೆ ಸೇರಿದ್ದಲ್ಲ. ೧೯೩೦ರ ಸಾಮುದಾಯಿಕ ಸತ್ಯಾಗ್ರಹದ ಹೊತ್ತಿಗೆ ಅವರೆಲ್ಲ ಸಾಲೆಗೆ ಹೋಗುತ್ತಿದ್ದ ಹುಡುಗರು. ಅವರಪ್ಪ, ಕರನಿರಾಕರಣೆ ಚಳುವಳಿಯಲ್ಲಿ ಬಾಗವಹಿಸಿದ್ದ. ತನ್ನನ್ನು ಶೋಷಿಸುತ್ತಿದ್ದ ಜಮೀನ್ದಾರನಿಗೆ ಕರಕೊಡಬಾರದೆಂದು ದೇಶದ ನಾಯಕರು ಹೇಳಿದರೆ ಯಾವ ಬಡ ಕೃಷಿಕನಿಗೆ ಸಂತೋಷವಾಗುವುದಿಲ್ಲ ? ಆದರೆ ಜೈಲುವಾಸ ಆಗ ಲಭಿಸಿರಲಿಲ್ಲ.

ವಿದೇಶೀಯ ಬಡಾಸಾಹೇಬರಿಗೆ ಸೋಲಾಯಿತೆಂದು ತಿಳಿದಾಗಲೆಲ್ಲ ಹಾಗಾದುದನ್ನು ಕಂಡಾಗಲೆಲ್ಲ, ಆಂಧ್ರದ ಹಳ್ಳಿಗಾಡಿನ ಈ ಹುಲಿಗೆ ಬಲು ಸಂತೋಷವಾಗುತ್ತಿತ್ತು.

ಬ್ರಿಟಿಷ್ ಯುದ್ಧ ಕೈದಿಗಳಿಗಿಂತ ಚೆನ್ನಾಗಿ ಹಿಂದೀ ಕೈದಿಗಳನ್ನು ಜಪಾನರು ನೋಡಿಕೊಳ್ಳುತ್ತಿದ್ದರು. ಶಿಬಿರದಲ್ಲಿ ಅದೇ ಮಾತು.

"ಜಪಾನರು ನಿಜಕ್ಕೂ ನಮ್ಮ ಮಿತ್ರರು" ಎಂದನೊಬ್ಬ.

"ಹೂಂ-ಹೂಂ" ಎಂದು ಮದ್ರಾಸಿನ, ಮಹಾರಾಷ್ಟ್ರದ, ಪಂಜಾಬಿನ ಸಾವಿರಾರು ಸೈನಿಕರು ಸೈಗುಟ್ಟಿದರು.

ಯಾರೋ ಒಬ್ಬ "ಏನೋಪ್ಪಾ, ನಮ್ಮನ್ನು ಮಿತ್ರರು ಎಂತ ಬನಾವ್‌ಮಾಡಿ ಹಿಂದೂ ದೇಶದ ಮೇಲೆ ದಂಡೆತ್ತಿಹೋಗುವ ಯೋಚನೆ ಈ ಕುಳ್ಳರಿಗೆ ಇದ್ದರೂ ಇರಬಹುದು" ಎಂದ.

ಆ ಮಾತಿನಲ್ಲಿ ವರದರಾಜುಗೆ ಪೂರ್ಣ ನಂಬಿಕೆ ಹುಟ್ಟಲಿಲ್ಲ. "ಆಜಾದ್ ಹಿಂದ್ ಫೌಜಿಗೆ ಯಾರೆಲ್ಲ ಸೇರುತ್ತೀರಿ ?" ಎಂದು ಜಪಾನರು ಕೇಳಿದಾಗ ಎಷ್ಟೋ ಜನ ಕೈಯೆತ್ತಿದರು, ವರದರಾಜು ಅವರಲ್ಲೊಬ್ಬ.

ವರದರಾಜು ಯೋಚಿಸಿದ : ಅವರಲ್ಲೆಷ್ಟೋ ಜನ ಬ್ರಿಟಿಷರಿಗೆ ಖಂಡಿತ ಸೋಲಾಗುತ್ತದೆ—ಎಂಬ ಧೈರ್ಯದಿಂದ ಜಪಾನರ ಹೊಸ

ಆಹ್ವಾನಕ್ಕೆ ಒಪ್ಪಿಗೆ ಕೊಟ್ಟರು. ಎಷ್ಟೋ ಮಂದಿ ಯುದ್ಧ ಕೈದಿಗಳ ಶಿಬಿರಕ್ಕಿಂತ ಸೇನೆಯು ಜೀವನ ಲೇಸೆಂದು ಭಾವಿಸಿದರು. ತಲೆಯೊಳಗೆ ಏನೇನೂ ಮೆದುಳಿಲ್ಲದಿದ್ದ ಇನ್ನು ಕೆಲವರು—ಸೇನೆಯಾದರೆ ಸಾಕು, ಯಾರದಾದರೇನು ? ಎಂದು ಯೋಚಿಸಿದರು........ರಾಜಕೀಯ ಪರಿಜ್ಞಾನವಿದ್ದು, ದೇಶದ ಬಿಡುಗಡೆಗಾಗಿ ಹೋರಾಡುತ್ತೇವೆ— ಎಂದು ಹೊರಟವರು ಕೆಲವರು....

ಸೈನ್ಯ-ಕವಾತು-ಶಿಕ್ಷಣ ಎಂತ ದಿನ ಹೋಗುತ್ತಿತ್ತು. ಸೈಗಾನ್ ಶೋನಾನ್ ರೇಡಿಯೋಗಳು ಕಿರಿಚಿಕೊಳ್ಳುತ್ತಿದ್ದುವು. "ಹಿಂದೂದೇಶದಲ್ಲಿ ಕ್ರಾಂತಿ ಆರಂಭವಾಗಿದೆ ! ಊರಿಗೆ ಊರೇ ಉರಿಯುತ್ತಿದೆ ! ಗಾಂಧಿ-ನೆಹರೂ-ಅಜಾದ್ ಎಲ್ಲರನ್ನೂ ಬಂಧಿಸಿದ್ದಾರೆ ! ಕ್ರಾಂತಿಯೋ ಕ್ರಾಂತಿ ! ಇನ್ನೇನು ದೇಶ ಸ್ವತಂತ್ರವಾದ ಹಾಗೆ—ಹಿಂದೀ ಯುದ್ಧ-ಕೈದಿಗಳೆಲ್ಲ ಸೇನೆ ಸೇರಿ ! ಸೇನೆ ಸೇರಿ !"

ನಿಜವಿರಬಹುದು—ಎಂದುಕೊಳ್ಳುವ ವರದರಾಜು. ನಿಜಕ್ಕೂ ಎಷ್ಟು ಕಾಲ ಈ ದಾಸ್ಯ ಇರಬೇಕು ? ಅಂತೂ ಸೇನೆ ಸೇರಿರುವ ತಾನು ತನ್ನ ಕೈಲಾದುದನ್ನು ಮಾಡದೆ ಇರುವುದುಂಟೆ ?

ಮರುಕ್ಷಣದಲ್ಲೆ ಮನೆಯು ನೆನಪಾಗುತ್ತಿತ್ತು. ತಾಯಿ, ಅಣ್ಣ-ತಮ್ಮ, ಅವರ ಕುಟುಂಬ, ತನ್ನಾಕೆ-ಮಗು ! ಈಯೆಲ್ಲ ಹಾಲಾಹಲ ಮುಗಿದ ಮೇಲೆ ಶಾಂತಿ ಬರುವುದು. ಆಗ ಸ್ವತಂತ್ರ ಹಳ್ಳಿಗಾಡಿನಲ್ಲಿ ಯಾವ ಅರಸನಿಗೂ ಕಪ್ಪಕೊಡದೆ, ಯಾವ ಧನಿಗೂ ಕಂದಾಯ ತೆರದೆ, ಸುಖವಾಗಿ ಸಾಗುವಳಿ ಮಾಡಿ ಉಟ್ಟು ಉಂಡು ಜೀವಿಸಬಹುದು.

ಹಿಟ್ಲರನ ಜತೆಯಲ್ಲಿದ್ದ ಸುಭಾಷ್ ಜರ್ಮನಿಯಿಂದ ಹೊರಟು ಬರ್ಮಕ್ಕೆ ಬಂದಿಳಿದ ಕಾಲ. ಭಾವೀ ಭಾರತದ ನಾಯಕರಾಗುವವರನ್ನು ವರದರಾಜು ಕಂಡ. ಅಪಕ್ವವಾಗಿದ್ದ ಅವನ ಮನಸ್ಸಿನಲ್ಲಿ ರಾಜಕೀಯ ಬೋಧೆ ಮೂಡಿಕೊಂಡಿತು. ಅವನ ಹಳ್ಳಿಯೊಂದೇ ಅಲ್ಲ, ಬೆಜವಾಡ ನಗರವೊಂದೇ ಅಲ್ಲ—ಇಡೀ ದೇಶವೇ ಒಂದು ದಿನ ಸ್ವತಂತ್ರವಾಗುವುದು.

ಒಂದು ರಾತ್ರಿ ಶಿಬಿರದಲ್ಲಿ ಇಸ್ಪೀಟಿನ ಆಟ ನಡೆದಿತ್ತು. ಯಾವನೋ ಒಬ್ಬ ಪೋಲಿಸು ಹಾಡೊಂದನ್ನು ಹಾಡುತ್ತಿದ್ದ. ಆಡುತ್ತಿದ್ದವರಲ್ಲೊಬ್ಬ, ಅದೇ ದಿನ ಸ್ತ್ರೀ ಸೇನೆಯನ್ನು ಸೇರಿದ್ದ ಕೆಲ ಗುಜರಾತಿ ಬನಿಯ ಹುಡುಗಿಯರ ಬಗ್ಗೆ ನಗೆಮಾತಾಡಿದ.

"ಷಟ್-ಅಪ್ !" ಎಂದ ವರದರಾಜು ಕ್ರುದ್ಧನಾಗಿ. ಆ ನಾಲ್ವರೂ ಎದ್ದು ನಿಂತು ವರದರಾಜುವಿನತ್ತ ತೋಳು ಬೀಸಿದರು. ತೆಲುಗು ಹುಲಿ ಆ ತೋಳಗಳಿಗೆ ಬುದ್ಧಿ ಕಲಿಸಿತು.

ಬೋಸರ ಭಾಷಣವಾಗುತ್ತಿತ್ತು ಆಗಾಗ್ಗೆ. ಜಪಾನರ ಆಯುಧ ಸಾಮಗ್ರಿಗಳನ್ನು ಪಡೆದು, ಅವರ ಸೇನೆಯನ್ನು ಕರೆದುಕೊಂಡು, ಹಿಂದೂದೇಶಕ್ಕೆ ಹೋದರೆ ಅನಂತರ ತೊಂದರೆಯಾಗದೇ ? ಎಂದು ವರದರಾಜು ಒಮ್ಮೊಮ್ಮೆ ಚಿಂತಿಸುತ್ತಿದ್ದ.

ಜಪಾನರು ಸ್ವಾತಂತ್ರ್ಯ ಕೊಡುವುದು ಎಷ್ಟೇದರೂ ಅಷ್ಟೇ ಎಂಬುದು ಅವನಿಗೆ ಖಚಿತವಾಗಿತ್ತು. ಬರ್ಮೀಯರಿಗೆ ಅವರು ಕೊಟ್ಟಿದ್ದ ಸ್ವಾತಂತ್ರ್ಯವನ್ನು ಅವನು ಕಣ್ಣಾರೆ ಕಂಡಿದ್ದ ; ಬರ್ಮದ ಬಡ ಬಾಂಧವರಿಗಾಗಿ ಮರುಕ ತೋರುತ್ತಿದ್ದ.

ಕೋಕನಾಡ-ವಿಶಾಖಪಟ್ಣಗಳ ಮೇಲೆ ಜಪಾನರು ಬಾಂಬುಗಳನ್ನುರುಳಿಸಿದರಂತೆ ! ವರದರಾಜುವಿನ ಆಂಧ್ರದ ಊರುಗಳು ಅವೆರಡು. "ಯಾಕೆ, ಯಾವ ಪರಮಾರ್ಥವನ್ನು ಸಾಧಿಸುವುದಕ್ಕೋಸ್ಕರ ಈ ಬಾಂಬಿನ ಸುರಿಮಳೆ ?" ಎಂದುಕೊಂಡ ಆತ.

ಬಂಗಾಲದಲ್ಲಿ ಅನ್ನಕ್ಷಾಮವಂತೆ. ಆದರೆ ಕಲ್ಕತ್ತಾ ಚಿತ್ತಗಾಂಗುಗಳ ಮೇಲೆ ಜಪಾನರ ವಿಮಾನ ಧಾಳಿ ಸಾಗಿಯೇ ಇತ್ತು !

ಒಂದು ವರ್ಷ, ಎರಡು ವರ್ಷ, ಮತ್ತೆ ಮೂರು-ನಾಲ್ಕು ತಿಂಗಳು. ಇಂಡಿಯನ್ ನ್ಯಾಷನಲ್ ಆರ್ಮಿ ಡೆಲ್ಲಿಗೆ ಸಾಗಲಿಲ್ಲ........ಮುಂದೆ ಹೋಗಲಿಲ್ಲ.

ಬರ್ಮದಲ್ಲಿ ಜಪಾನರ ಆಳ್ವಿಕೆಯ ಅವಸಾನಕಾಲ ಒದಗಿತ್ತು. ಫಾಸಿಸ್ಟ್ ವಿರೋಧಿ ಬರ್ಮೀಯ ಜನಸ್ತೋಮ ಬಂಡಾಯ ಹೂಡಿ

ಲಾ

ಶೋಷಕರನ್ನು ನಿರ್ಮೂಲಮಾಡತೊಡಗಿತು. ಆದರೆ ಬಿಳಿಯ ಸಾಮ್ರಾಜ್ಯಶಾಹಿ ಜಪುಘೇರಿಯೊಡನೆ ಮುಂದೆ ಬಂದು ಯೂನಿಯನ್ ಜಾಕನ್ನು ಹಾರಿಸದಿರಲಿಲ್ಲ. ಐ ಎನ್. ಎ. ಬ್ರಿಟಿಷರ ವಶವಾಯಿತು

......ಮೂರು ವರ್ಷಗಳ ಅನಂತರ ಈ ಸಾವಿರಾರು ಜನ ಹಿಂದೀಯ ಮಕ್ಕಳು ತಾಯಿ ಮಣ್ಣಿನ ಮೇಲೆ ಪದಾರ್ಪಣ ಮಾಡಿದರು. ಅವರ ಪ್ರೀತಿಯ ದೇಶ ಅದು. ಪರತಂತ್ರವಾಯಿತು ನಿಜ ಆದರೆ ಅದೇ ಅವರ ಉಸಿರು. ವಿದೇಶೀಯರ ತುಳಿತದಿಂದ ಹೊಲಸುಗೊಳಿಸಲ್ಪಟ್ಟ ಹೊಲ ನಿಜ ಆದರೆ ಅದೇ ಅವರ ತಾಯ್ನೆಲ.

ಮತ್ತೆ, ತಮ್ಮ ದೇಶ ಸ್ವತಂತ್ರವಾಗಬೇಕೆಂದು ಆಶಿಸಿದ್ದಕ್ಕಾಗಿ ಸಾವಿರಾರು ಮೈಲುಗಳಾಚೆಯ ಸಾಮ್ರಾಜ್ಯಶಾಹಿ ಅವರ ವಿಚಾರಣೆ ನಡೆಸಿತು.

ವರದರಾಜು ಊರಿಗೆ ಒಂದಲ್ಲ, ಎರಡಲ್ಲ, ಮೂರು–ನಾಲ್ಕು ಕಾಗದ ಬರೆದ---ಬರೆಸಿದ. ಯಾವುದಕ್ಕೂ ಉತ್ತರ ಬರಲಿಲ್ಲ.

ಕ್ರಾಂತಿಯಾಗಿತ್ತಂತೆ ಈ ದೇಶದಲ್ಲಿ ! ಯಾರು ಹೇಳಿದವರು ? ದಪ್ಪ ಬೆಳೆವ ಶ್ರೀಮಂತರ ಸಿರಿವಂತಿಕೆ ಸಾವಿರ ಪಾಲಾಗಿತ್ತು. ಕುಗ್ಗಿದವರು ನೆಲದವರೆಗೂ ಕುಗ್ಗಿಯೇ ಹೋಗಿದ್ದರು. ಇದು ಕ್ರಾಂತಿಯೇನೋ!

ಬೋಸ್, ಜಪಾನರ ಸಹಾಯ ಪಡೆದು ಈ ದೇಶಕ್ಕೆ ಬಂದರೆ ಅವರ ಇದಿರಾಗಿ ಹೋರಾಡುವೆ—ಎಂದು ಜವಾಹರ್ ಹೇಳಿದ್ದರಂತೆ ಆದರೆ ಅದು ಹಿಂದೆ. ಈಗ ಬೋಸ್ ಮತ್ತು ಅವನ ಸೈನಿಕರನ್ನು ವೀರರೆಂದು ನೆಹರೂ ಕರೆಯುತ್ತಿದ್ದುದನ್ನು ವರದರಾಜು ನೋಡಿದ. ಕಮ್ಯೂನಿಸ್ಟರು "ಜಪಾನಿ ಆಕ್ರಮಣಕಾರರನ್ನು ಇದಿರಿಸಬೇಕು" ಎನ್ನುತ್ತಿದ್ದರಂತೆ. ಆದರೆ ಅದು ಹಿಂದೆ. ಈಗ "ಕಮ್ಯೂನಿಸ್ಟರು ದೇಶಕ್ಕೆ ಘಾತಮಾಡಿದರು" ಎಂದು ಕಾಂಗ್ರೆಸ್ ಮುಖಂಡರು ಹೇಳುತ್ತಿದ್ದುದನ್ನು ರಾಜು ನೋಡಿದ. ತಾನು ಬರ್ಮಾಕ್ಕೆ ಹೋದಾಗ ಕಮ್ಯೂನಿಸ್ಟರ ವಿಚಾರವನ್ನೇ ರಾಜು ಕೇಳಿರಲಿಲ್ಲ. ಅಷ್ಟರಲ್ಲೇ ಅವರು ಅಷ್ಟು ದೊಡ್ಡ ಶಕ್ತಿಯಾದರೆ ?

ಇನ್ನೊಂದಿತ್ತು ಲೀಗು.......ಅದಕ್ಕೆ ಪಾಕಿಸ್ಥಾನ ಬೇಕೇಬೇಕಂತೆ ಕಾಂಗ್ರೆಸ್-ಲೀಗುಗಳ ಕಾದಾಟ ನಡೆದೇ ಇತ್ತು.

....ಏನು ಹುಚ್ಚಾಟ ? ಏನು ಹುಚ್ಚಾಟ ? ಎಂದುಕೊಂಡ ವರದ ರಾಜು....ಅವನಿಗೊಂದೂ ಸ್ಪಷ್ಟವಾಗಲಿಲ್ಲ ........ ಮೆಚ್ಚುಕೆಯಾಗಲಿಲ್ಲ. "ಸ್ವತಂತ್ರವಾಗಬೇಕು" ಎಂದು ತಾನು ಆಶಿಸುತ್ತಿದ್ದ ಈ ದೇಶ ಎಂಥ ದೇಶ ! ಹಾಳಾದ ದರಿದ್ರ ದೇಶ ! "ಮನೆಗೆ ಹೋಗಬೇಕು....ನಾನು ಮನೆಗೆ ಹೋಗಬೇಕು" ಎಂದು ರಾಜು ನೂರಾರು ಸಲ ಹೇಳಿಕೊಂಡ. ತಾನು ತೊಂಭತ್ತು ವರ್ಷ ವಯಸ್ಸಿನ ಮುದುಕ ಎಂಬಂತೆ ರಾಜುಗೆ ಒಮ್ಮೊಮ್ಮೆ ಭಾಸವಾಗುತ್ತಿತ್ತು. ಮನೆಗೆ ಹೋದಾಗ ತಾಯಿಯ ಮಡಿ ಲಲ್ಲಿ ಮುಖವಿಟ್ಟು ಗಳಗಳನೆ ಅತ್ತು ಪುನಃ ಮಗುವಾಗಬೇಕು. ರಾಜೇ ಶ್ವರನನ್ನು ಎತ್ತಿ ಹಾರಾಡಿಸಬೇಕು. ಮತ್ತೆ ತನ್ನಾಕೆಯೊಡನೆ ಹೊಲದ ಬಳಿ ಹೋಗಿ, ಹಿಂದೆ, ಹಲವು ವರ್ಷಗಳ ಹಿಂದೆ, ಮಾಡಿದ್ದಂತೆ ಆ ಹಸುರು ಹುಲ್ಲಿನ ಮೇಲೆ ಹೊರಳಾಡಬೇಕು.

ನಾಗಪುರದಿಂದ ಹೊರಟಿದ್ದ ರೈಲು ಬೆಜವಾಡವನ್ನು ತಡವಾಗಿ ಬಂದು ತಲಪಿತು. ಆಗ ನಡುವಿರುಳು. ಅಲ್ಲಿಳಿದವನು ಅವನೊಬ್ಬನೇ ಐ. ಎನ್. ಎ. ಯೋಧ. ನಾಲ್ಕು ಬಾರಿ ಅವನು ಕೂಗಿ ಕರೆದ "ನಾರಾ ಯಣರಾಜೂ ! ಕೃಷ್ಣರಾಜೂ !........ಓ ನಾರಾಯಣರಾಜೂ !....ಕೃಷ್ಣ ರಾಜೂ !...."

ಯಾರೂ 'ಕೂ' ಗೊಡಲಿಲ್ಲ. ಹುಂ. ತಲಪಿರಲಾರದು. ತನ್ನ ಪತ್ರ....ಹೊತ್ತಾರೆ ಎದ್ದು ಹಳ್ಳಿಗೆ ನಡೆದರಾಯಿತು.

ಆರೇಳು ಮೈಲು ದೂರ ಆ ಹಳ್ಳಿ. ಕಟ್ಟಾಳು ವರದರಾಜು ಬೆಳಗ್ಗೆ ಎದ್ದು ಹಾದಿ ನಡೆದ. ಬೆಳಕು ಹರಿದಂತೆ ಎದುರಿಗೆ ಬಂದ ಪ್ರತಿ ವ್ಯಕ್ತಿ ಯನ್ನೂ ರಾಜು ದಿಟ್ಟಿಸಿ ನೋಡಿದ. ಯಾರಾದರೂ ತನ್ನ ಗುರುತು ಹಿಡಿಯುವರೇನೋ ಎಂಬ ಆಸೆ.

ಮತ್ತೂ ಮೂರು-ನಾಲ್ಕು ಮೈಲುಗಳ ನಡಿಗೆ ಇದ್ದಾಗಲೇ ರಾಜು ತನ್ನ ಹಳ್ಳಿಯವನೇ ಒಬ್ಬ ಬರುತ್ತಿದ್ದುದನ್ನು ನೋಡಿ, ಗುರುತಿಸಿದ.

"ಆ ಅಣ್ಣ ! ವರದರಾಜು !" ಎಂದು ತುಂಬಿದ ಹೃದಯದಿಂದ ಎರಡೇ ಮಾತು ಹೇಳಿ ಆತ ರಾಜು ಕೈ ಹಿಡಿದು ಹಾಗೆಯೇ ನಿಂತುಬಿಟ್ಟ. ಮನೆವಾರ್ತೆ ಕೇಳುವ ತವಕ ರಾಜುವಿಗೆ. ಆದರೆ ಆ ಹಳ್ಳಿಗನ ಬಾಯಿಂದ ಮಾತು ಹೊರಡದು.

"ಕುಳಿತುಕೊಳ್ಳಣ್ಣಾ" ಎಂದ ರಾಜು......."ಎಲ್ಲವನ್ನೂ ಹೇಳ ಬೇಕು . ಎಲ್ಲವನ್ನೂ....ಹೇಗಿದೆ ನಮ್ಮ ಮನೆ ? ಹೊಲ ? ನಮ್ಮಮ್ಮ ?"

ಆ ಹಳ್ಳಿಗ ಹೇಳಿದ, "ನೀನು ಬರುತ್ತಿ ಎಂತ ಗೊತ್ತಿತ್ತು. ನಿನ್ನೆ ನಿನ್ನ ತಾಯಿ ಹೇಳಿದರು. ರೇಲ್ವೆ ಸ್ಟೇಷನಿಗೇ ಬರೋಣವೆಂದಿದ್ದೆ.... ಮತ್ತೆ ನೋಡು....ನಮ್ಮ ಪರಿಚಯವೂ ಸ್ವಲ್ಪದ್ದೇ... ಆದರೂ....ಬೆಳಿಗ್ಗೆ ಹೀಗೇ ಹೊರಟೆ...."

"ಯಾಕೆ ? ನಮ್ಮಣ್ಣ ಯಾಕೆ ಬರಲಿಲ್ಲ ? ವ್ಯ—"

"ಅಯ್ಯೋ ! ಅಯ್ಯೋ ! ಯಾರೂ ಹೇಳಲಿಲ್ಲವೆ ? ಯಾರೂ ಬರೆ ಯಲಿಲ್ಲವೆ ? ಅಮ್ಮ ಕಾಗದ ಹಾಕಿದ್ದರಲ್ಲ !"

ರಾಜು ಉದ್ವೇಗದಿಂದ ಕೇಳಿದ, "ಏನು-ಏನಾಗಿದೆ? ಏನಾಯಿತು?"

ತಲೆ ತಗ್ಗಿಸಿ ಆ ಹಳ್ಳಿಗ ಹೇಳಿದ, "ನಾರಾಯಣರಾಜುವನ್ನು ಪೋಲೀಸರು ಗುಂಡುಹೊಡೆದು ಕೊಂದರು !"

ಬಾಯಿ ತೆರೆದ ರಾಜುವಿನತ್ತ ದೃಷ್ಟಿ ಹರಿಸದೆ ಆತ ದಡದಡನೆ ಮಾತು ಉರುಳಿಸಿದ. "ಮೂರು ವರ್ಷಕ್ಕೆ ಹಿಂದೆ ಕಾಂಗ್ರೆಸ್ ಗಲಾಟೆ ಆಯ್ತು. ಪಟ್ಟಣದಿಂದ ಒಂದು ರಾತ್ರಿ ಸ್ವಲ್ಪ ಜನ ಇಲ್ಲಿಗೆ ಓಡಿಬಂದರು. ನಿಮ್ಮ ಣ್ಣನ ಮನೆಯಲ್ಲಿ ಅಡಗಿದ್ದರು. ಬೆಳಿಗ್ಗೆ ಪೋಲೀಸ್ ಪಟಾಲಾಂ ಬಂದಾಗ ಅಡಗಿದ್ದವರು ಹಾರಿಬಿದ್ದು ಓಡತೊಡಗಿದರು. ಪೋಲೀಸರು ಹಾರಿಸಿದ ಗುಂಡುಗಳಲ್ಲಿ ಒಂದು ನಿನ್ನಣ್ಣನೆದೆಗೇ ತಾಗಿತು...."

ವರದರಾಜುವಿನ ತುಟಿಯದುರಿತು, ಕಣ್ಣು ಭಾರವಾಯಿತು, ಹಣೆ ನೆರಿಗೆ ಕಟ್ಟಿತು. ಗುಂಡಿನ-ಹೊಡೆತದ, ಸಾವಿನ ದೃಶ್ಯ, ಸಾವಿರಸಾವಿರ

ಆತ ನೋಡಿದ್ದ ...ಇಲ್ಲೂ ಆ ಕತೆ....ಅಣ್ಣನನ್ನು ಪೋಲಿಸರ ಗುಂಡು ಬಲಿ ತೆಗೆದುಕೊಂಡಿತ್ತು.

"ಕೃಷ್ಣರಾಜು ಎಲ್ಲಿ?" ಎಂದ ವರದರಾಜು, ಗಂಟಲಿನಿಂದ ಹೊರಳದೇ ಇದ್ದ ಸ್ವರವನ್ನು ಹೊರಹಾಕಿ....

ಆ ಹಳ್ಳಿಗ ಎರಡೂ ಕೈಗಳಿಂದ ತನ್ನ ತಲೆ ಕೂದಲನ್ನು ಅದುಮಿ ಕೊಂಡು, ಅದೆಲ್ಲದಕ್ಕೂ ತಾನೇ ಕಾರಣ ಎಂಬಂತೆ, ಎದ್ದು ನಿಂತು ಹೇಳಿದ: "ಕೃಷ್ಟರಾಜು ಜೈಲಲ್ಲಿದ್ದಾನೆ!"

"ಜೈಲಲ್ಲಿ!?"

"ಹೂಂ. ಅವನು ಕದಿಯಲಿಲ್ಲ. ಅನ್ಯಾಯ ಮಾಡಲಿಲ್ಲ. ನಮ್ಮ ಪರವಾಗಿ ವಾದಿಸಿದ ಎಂತ ಪೋಲೀಸರು ಹಿಡಿದುಕೊಂಡು ಹೋದರು. ಕಳ್ಳ ಸಂತೆಯವರನ್ನೆಲ್ಲ ಕೃಷ್ಣರಾಜನ ಪಾರ್ಟಿಯವರು ಬಯಲಿಗೆ ಎಳೀತಿದ್ರು. ನಮ್ಮ ಕಿಸಾನ ಸಭೆಯೂ ಹಾಗೇ ಮಾಡಿತು....ಜಮೀನ್ದಾರ ಕೃಷ್ಣರಾಜುವನ್ನು ಹಿಡಿಸಿಕೊಟ್ಟ. ಕೃಷ್ಣರಾಜು ಕಿಸಾನ ಸಭೆಯ ಕಾರ್ಯ ದರ್ಶಿ ಆಗಿದ್ದ........"

ಕಳ್ಳಸಂತೆ—ಪೋಲೀಸರು—ಪಾರ್ಟಿ—ಕಿಸಾನ ಸಭೆ—ಜೈಲು.....

ಮಗುವಿನಂತೆ ಉದ್ವೇಗದಿಂದ ಆ ಹಳ್ಳಿಗ ಹೇಳಿದ:

"ಅಣ್ಣ! ಅಂತೂ ನೀನು ಬಂದೆಯಲ್ಲ—ನಮಗೆ ಸಂತೋಷ.... ಅಣ್ಣ ನೀನು ಮಿಲ್ಟ್ರಿಯಲ್ಲಿದ್ದೆ. ನಿನ್ನ ಡ್ರೆಸ್ ಎಲ್ಲಿ?

"ಪೋಲಿಸರು ತೆಗೆದುಕೊಂಡರು" ಎಂದು ಯಂತ್ರದಂತೆ ವರದ ರಾಜು ಹೇಳಿದ.

"ಹೂಂ. ಪೋಲಿಸರು! ಯಾವಾಗಲೂ ಪೋಲೀಸರೇ!"

ಆ ಹಳ್ಳಿಯ ಬಾಂಧವರಿಬ್ಬರು ರಾಜೂ ಮನೆ ಕಡೆ ನಡೆದರು. ದೂರದಲ್ಲಿ ಅಲ್ಲೊಬ್ಬರು ಇಲ್ಲೊಬ್ಬರು "ಓ ರಾಜೂ! ಬಾ ರಾಜೂ!" ಎನ್ನುತ್ತಿದ್ದರು.

ಅಯ್ಯನ್ನೆ !

ವರದ ಹೇಳಿಕೊಂಡ : "ನಾವು ಮೂವರಿದ್ದೆವು—ನಾರಾಯಣ, ವರದ, ಕೃಷ್ಣ—ಇನ್ನು ನಾನೊಬ್ಬನೇ ರಾಜು !"

ರಾಜುಕುಟುಂಬವನ್ನು ಮೂರು ಮಂದಿ ಹೆಣ್ಣುಮಕ್ಕಳು ನಡೆಸಿಕೊಂಡು ಬಂದಿದ್ದರು ಅಷ್ಟುಕಾಲ. ತಮ್ಮಲ್ಲಿ ಅಚಲ ವಿಶ್ವಾಸ, ನೆರೆಯ ಸೋದರರ ಸೌಹಾರ್ದ, ಕಿಸಾನ ಸಭೆಯ ಬೆಂಬಲ, ತಮ್ಮ ಕೈಮೈ, ಜಮೀನ್ದಾರನೊಬ್ಬನ ಹೊಲ—ಅಂತೂ ಮೇಲೆ ಆಕಾಶ, ಕೆಳಗೆ ಭೂಮಿತಾಯಿ. ಹೀಗೆ ಅವರ ಜೀವನ ಸಾಗಿತ್ತು.

ಭಾರವಾದ ನೇಗಿಲನ್ನಿನ್ನು ವರದರಾಜನ ಭುಜಗಳು ಹೊರಬೇಕು. ಆ ಹಳ್ಳಿಯ ಪುನರ್ರಚನೆಗೆ ಅವನು ಬೆವರು ಸುರಿಸಬೇಕು ; ಧೀರನಂತೆ ದುಡಿಯಬೇಕು.

ಆ ಮಾವಿನ ತೋಪಿನ ಎಡಕ್ಕೆ ಹಾದು, ನೀರ ತೋಡನ್ನು ದಾಟಿ ಬಯಲುಗದ್ದೆಯ ನೇರಿಯ ಮೇಲೆ ಉದ್ದಕ್ಕೆ ಹೋದರೆ ಅವರ ಮನೆ ಸಿಗುವುದು............

"ಅಮ್ಮಾ ! ಅಮ್ಮಾ ! ನಾನು ಬಂದಿದ್ದೇನೆ........"

"ಬಂದಿಯಾ ಮಗನೆ, ಬಾ ವದ್ದೂ ಬಾ........"

"ಅಲ್ಲೇ ನಿಲ್ಲಮ್ಮಾ........ಬಿದ್ದೀಯೇ ಎಲ್ಲಾದರೂ—ನಾನೇ ಬಂದೆ. ಇಗೋ !"

"ಕಲ್ಯಾಣೀ, ಪಾರ್ವತೀ, ರಾಜೇಶ್ವರೀ, ಕಮಲೂ ! ವದ್ದೂ ಬಂದಿದ್ದಾನೆ—ವದ್ದೂ ! ಚೆಲ್ಲಾ ! ಎಲ್ಲರ ಮನೆಗೂ ಹೇಳಪ್ಪಾ....ನಮ್ಮ ವದ್ದೂ ಬಂದಿದ್ದಾನೆ—ವದ್ದೂ !....ಯುದ್ಧದಿಂದ ವದ್ದೂ ಹಿಂದೆ ಬಂದಿದ್ದಾನೆ...."

ಹೆಂಡತಿ ಜಲಜಾ ಬಂದು ವರದರಾಜುವಿನ ಪಾದ ಹಿಡಿದು ನಮಸ್ಕರಿಸಿದಳು. "ನೀನು ಬರುವೆ ಎಂದು ಗೊತ್ತಿತ್ತು ವದ್ದೂ....ಇನ್ನೂ ಆಕೆ ಮಾಂಗಲ್ಯ ಕಳಚಿಲ್ಲ....ಭಾಗ್ಯವಂತೆ...."

ಅಂಜುತ್ತಂಜುತ್ತ ತನ್ನ ತಾಯ ಸೆರಗನ್ನು ಹಿಡಿದು ನಿಂತಿದ್ದ ಆ ಆ ಚಿಕ್ಕ ಕರಿಯ ಹುಡಗ?

"ಅವನು ರಾಜೇಶ್ವರ ... ...ಗುರುತು ಸಿಗಲಿಲ್ಲವೇ ವರದರಾಜು ?"

ಆಕೆ ಆ ಜವ್ವನೆ, ಗಂಭೀರ ಸುಂದರ—ಧೃಢ ಶರೀರದ ಆ ಯುವತಿ ?

"ಆಕೆ ಕೃಷ್ಣರಾಜನ ಹೆಂಡತಿ........ಆ ದಿನ ಮದುವೆಗೆ ಬಂದಿದ್ದೆ ಯಲ್ಲ. ಆಯಿತು, ಇನ್ನೊಂದು ವರ್ಷದಲ್ಲಿ ಅವನೂ ಬರುತ್ತಾನೆ...."

ಆಕೆ—ಆಕೆ ? ಆ ವಿಧವೆ ?

"ಬಾ ತಾಯಿ....ನಿನ್ನ ಭಾವಮೈದುನ ಬಂದಿದ್ದಾನೆ. ನಾರಾಯಣ ರಾಜು ಹೋದ....ಆದರೆ ದೇವರು ವರದನನ್ನು ಒದಗಿಸಿದ್ದಾನೆ........'

ಹಲವು ಹೋರಾಟಗಳ ಹುಲಿ ತಾಯಿಯ ಕಾಲು ಹಿಡಿದು ಗೋಳೆಂದು ಅತ್ತಿತು. ಎಷ್ಟೋ ಕಾಲದಿಂದ ಕೂಡಿಟ್ಟಿದ್ದ ಕಣ್ಣೀರು ಹೊಳೆ ಹೊಳೆಯಾಗಿ ಹರಿಯಿತು........

ತಾಯಿ ಹೇಳಿದಳು: "ಬಾ ಮಗನೆ ಬಾ ಕಂದ....ಬನ್ನಿ ಮಕ್ಕಳೆ, ಒಳಗೆ ಬನ್ನಿ !"



ನವೆಂಬರ್, ೧೯೪೫



ಮೋದಿ ಪವರ್ ಪ್ರಿಂಟಿಂಗ್ ವರ್ಕ್ಸ್, ಬೆಂಗಳೂರು ಸಿಟಿ